# Antaranga

## Udipi, S. I.

ಸಂಪುಟ ೧.
ಸಂಚಿಕೆ ೧೭.



೭ ನವಂಬರ್ '೩೮
ಆದಿತ್ಯವಾರ.

ಮಾಲಕರು ಮುದ್ರಕರು ವ ಪ್ರಕಾಶಕರು:
**ಸಪ್ಲೈ ಏಜೆನ್ಸಿ ಲಿಮಿಟೆಡ್,**
**ಉಡುಪಿ.**
ಮುದ್ರಣ ವ ಪ್ರಕಟನಾ ಸ್ಥಳ:
**ಮುನಿಸಿಪಲ ಪವರ್ ಪ್ರೆಸ್,**
**ಮುನಿಸಿಪಲ, ಉಡುಪಿ.**

# ಅಂತರಂಗ

ಎಸ್. ಯು. ಪಣಿಯಾಡಿ. (*Editor in Chief.*) — ಕೆ. ಹೈದರ್. (*Managing Editor.*)




## ಚಂದಾ ವಿವರ:

**ವಾರ್ಷಿಕ ಚಂದಾ ಮೂರು ರೂಪಾಯಿ.**

ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.

**ಬಿಡಿ ಸಂಚಿಕೆ: ಒಂದಾಣೆ.**

ನಿಮ್ಮ ಊರಿನ ಏಜಂಟರಿಂದ ಪಡಕೊಳ್ಳಿರಿ.

## ಜಾಹಿರಾತಿನ ದರ:

| | | | | |
|---|---|---|---|---|
| ಇಡೀ | ಪುಟ | ರೂಪಾಯಿ | ೧೦—೦—೦ | ಒಂದು ಸರ್ತಿಗೆ. |
| ಅರ್ಧ | ,, | ,, | ೫—೦—೦ | ,, |
| ಕಾಲು | ,, | ,, | ೩—೦—೦ | ,, |
| ಅರೆಕಾಲು | ,, | ,, | ೨—೦—೦ | ,, |
| ಕೆಲವು ಇಂಚಿಗೆ | ,, | ,, | ೧—೦—೦ | ,, |

## ಜಾಹಿರಾತು ಕೊಡುವವರಿಗೆ ಸಲಹೆ:

೧. ಜಾಹಿರಾತಿನ ವಿಷಯಗಳು ಅಯೋಗ್ಯವಾಗಿ ಕಂಡುಬಂದಲ್ಲಿ ಮುದ್ರಿಸಲಾಗುವುದಿಲ್ಲ.
೨. ಒಂದೇ ಬದಿಯಲ್ಲಿ ವಿವರವಾಗಿ ಬರೆಯಬೇಕು.
೩. ಬದಲಾವಣೆಯಿದ್ದರೆ ಒಂದು ವಾರ ಮುಂಚಿತವಾಗಿ ತಿಳಿಸಬೇಕು.
೪. ಬ್ಲೋಕುಗಳು ವಾಪಾಸು ಬೇಕಾದರೆ ಅವರವರ ಖರ್ಚಿನಿಂದಲೇ ವಾಪಾಸು ಪಡೆಯಬೇಕು.
೫. ಜಾಹಿರಾತಿನ ಬಾಬ್ತು ಹಣವನ್ನು ಮುಂಗಡವಾಗಿಯೇ ಕೊಡಬೇಕು.

# ಅಂತರಂಗ

## ಸ್ಪೈನಿನ ಹೋರಿ - ಕೋತಿಗಳ ಯುದ್ಧ.




**ಜನರಲ್** ಫ್ರೇಂಕೊ: ಅಯ್ಯಯ್ಯೋ, ಹಾಯ್ಲಿಕ್ಕೆ ಬರುತ್ತಿದೆ ಹೋರಿ, ಕೆಳಗೆ ಹೋಗೋಕೆ ಬಿಡೋದಿಲ್ಲ, ಮೇಲೆ ಹೋಗೋಕಾಗೋದಿಲ್ಲ. ಏನ್ಮಾಡ್ತೀರಪ್ಪಾ, ಜರ್ಮನ್ ಇಟಲಿಗಳಿಗೆ ಕೇಳ್ಸೋದಿಲ್ವೆ?

**ಇಂಗ್ಲೆಂಡೇಶ್ವರ:** ಕೇಳುತ್ತಿ ಕಾಣೋ, ನಾಕೊಟ್ಟ ಎಬಿಸೀನಿಯಾ, ಜೆಕೊಸ್ಲೊವೇಕಿಯಗಳನ್ನಾ ನುಂಗುತ್ತಿವೆ. ತಿಂದದ್ದು ಗಂಟಲೊಳಗೆ ಇಳೀಬೇಡ್ವೆನೋ ಚೆಪ್ಪ?

## ಚುರುಕು ಸಮಸ್ಯೆಗಳು

### ಚೇಪ್ಲಿನ್-ಹಿಟ್ಲರ್ ಯುದ್ಧ!

ಜೆಕೊಸ್ಲೊವೇಕಿಯದ ಬಳಿಕ ತಲೆಯೆತ್ತಿ ನಿಂತಿರುವ ಇನ್ನೊಂದು ಸಮಸ್ಯೆಯೆಂದರೆ ಹಿಟ್ಲರ್-ಚಾಪ್ಲಿನರೊಳಗೆ ಚರ್ಚೆ.

ಹಿಟ್ಲರನು ಜಗತ್ಪ್ರಸಿದ್ಧ ನಟ ಚಾರ್ಲಿ ಚೇಪ್ಲಿನನ ಮೀಸೆಯನ್ನು ಅನುಕರಿಸಿದನೆಂದು ಚಾರ್ಲಿಯ ಪ್ರತಿಪಾದನೆ. ಈ ಯುದ್ಧದಿಂದಾಗಿ ಯಾರು ಮೀಸೆಬೋಳಿಸಬೇಕಾಗಬಹುದೆಂದು ಯಾರಿಗೂ ತಿಳಿದುಬರಲಿಲ್ಲ!

.......

### ಬರ್ನಾರ್ಡ್ ಷಾರವರು ಸಮಸ್ಯೆಯನ್ನು ಬಿಡಿಸಿದರು!

ಪ್ರತಿದಿನ ಗಡ್ಡ ತೆಗೆಯುವುದು ಅನಾವಶ್ಯಕದ ಕೆಲಸವೆಂದು ಭಾವಿಸಿ ಪ್ರಸಿದ್ಧ ಗ್ರಂಥಕರ್ತರಾದ ಜಾರ್ಜ್ ಬರ್ನಾರ್ಡ್ ಷಾರವರು ಒಂದು ಉಪಾಯವನ್ನು ಕಂಡುಹಿಡಿದರು. ಉಪಾಯವು ಮತ್ತಾವುದೂ ಅಲ್ಲ. ಗಡ್ಡ ಬಂದಷ್ಟು ಬೆಳೆಸುವುದು!

.......

### ಚೇಂಬರ್ಲೇನರು ಜರ್ಮನಿಯ ಮಹಾ ರಾಜಕಾರಣಿ!

“ಬ್ರಿಟಿಷ್ ಪ್ರಧಾನ ಮಂತ್ರಿಗಳು ಜರ್ಮನಿಯ ಮಹಾ ರಾಜಕಾರಣಿಗಳು” ಎಂದೊಮ್ಮೆ ಲಂಡನಿನ ವೃತ್ತಪತ್ರಿಕೆಯೊಂದರಲ್ಲಿ ಪ್ರಕಟವಾಯಿತಂತೆ.

ಮಿ| ಜಿನ್ನರು ಇಂಗ್ಲೆಂಡಿನ ಮಹಾ ರಾಜಕಾರಣಿಗಳೆಂದು ಹೇಳಬಹುದೆ?

.......

### ಹೈಲ್ ಸೆಲಾಸಿಯವರ ತಿಳುವಳಿಕೆ.

ಇತ್ತೀಚೆಗೆ ಎಬಿಸೀನಿಯದ ಮಾಜಿ ಚಕ್ರವರ್ತಿ ಹೈಲ್ ಸೆಲಾಸಿಯರು ಡಾ| ಬೆನೆಷರಿಗೆ ಹೀಗೆ ತಂತಿಕೊಟ್ಟರಂತೆ:

“ಬ್ರಿಟಿಷ್ ‘ಬೆಂಬಲ’ವನ್ನು ನೀವು ಪಡೆಯುತ್ತಿರುವುದು ನನಗೆ ತಿಳಿದುಬಂದಿದೆ. ನಿಮಗೆ ನನ್ನ ಸಹಾನುಭೂತಿಗಳು.”

ಪ್ರಾಯಶಃ ಸೆಲಾಸಿಯವರಿಗೆ ಬ್ರಿಟಿಷರು ಯುದ್ಧಕಾಲದಲ್ಲಿ ಕೊಟ್ಟ ಬೆಂಬಲದ ನೆನಪು ತುಂಬಾ ಇರಬಹುದು.

.......

### ಇನ್ನೊಂದು ಜೆಕೊಸ್ಲೋವೇಕಿಯ.

ಯುರೋಪಿನ ಆರ್ಥಿಕ ಯಜಮಾನಿಕೆಯು ಜರ್ಮನಿಗೆ ಬೇಕಾಗಿರುವುದರಿಂದ ಹೆರ್ ಹಿಟ್ಲೆರನು ಮುಂದೆ ಸ್ವಿಝರ್‌ಲೇಂಡನ್ನು ನುಂಗುವನೆಂದು ಅಲ್ಲಿಯ ಪತ್ರಿಕೆಗಳು ತಮ್ಮ ಬೆದರಿಕೆಯನ್ನು ವ್ಯಕ್ತಪಡಿಸಿವೆ.

ಜೆಕೊಸ್ಲೊವೇಕಿಯವನ್ನು ನುಂಗಲು ಇಂಗ್ಲೆಂಡ್ ಸಹಾಯಮಾಡಿದರೆ, ಸ್ವಿಝರ್‌ಲೇಂಡನ್ನು ನುಂಗಲು ಫ್ರಾನ್ಸು ಬೆಂಬಲನೀಯುವುದೆಂದು ಬೇರೆ ಹೇಳಬೇಕೆ?

.......

### ವಿಶ್ವವೈಚಿತ್ರ್ಯ



ಆಧುನಿಕ ಸಬ್ ಮೆರೀನುಗಳಿಗೆ ಮೀನಿನ ರೂಪವನ್ನು ಕೊಟ್ಟಿರುವರೆಂದೆಣಿಸಬೇಡಿ. ಪ್ರಕೃತಿಯು ಸಮುದ್ರದ ಅಡಿಯಲ್ಲಿ ವಾಸಿಸುವ ಈ ಮೀನುಗಳಿಗೆ ವಿಚಿತ್ರ ಸಾಧನಗಳನ್ನೊದಗಿಸಿದೆ. ಮೇಲಿರುವ ಮೀನಿನ ತಲೆಯು ಒಂದು ‘ಬ್ಯಾಟರಿ ಲೈಟ’ನಂತಿವೆ. ಅದರ ಕೆಳಗಿನದಕ್ಕೆ ಮೋಟಾರ್ ಬಂಡಿಯ ‘ಹೆಡ್ ಲ್ಯಾಟ’ ನಂತೆ ಬೆಳಕನ್ನು ಹಬ್ಬುವ ಶಕ್ತಿಯಿದೆ. ಇದಕ್ಕೆ ‘ಭಾಳಲೋಚನ’ವೆಂದು ಇಷ್ಟವಿದ್ದರೆ ಕರೆಯಿರಿ. ಹಾವಿನಂತಿರುವ ಮತ್ತೊಂದು ಮೀನಿಗೆ ಎಲ್ಲೆಡೆಗಳಲ್ಲಿಯೂ ವಿದ್ಯುಚ್ಛಕ್ತಿಯ ಬೆಳಕು! ಅತ್ಯಂತ ಕೆಳಗಿರುವ ಮೀನಿನ ಉದರ ಪ್ರದೇಶವು ದಸರಾ ಕಾಲದಲ್ಲಿ ಮೈಸೂರನ್ನು ನೋಡಿದಂತಾಗುತ್ತದೆ. ಮನುಷ್ಯನಿಗೂ ಇಂತಹ ಸವಲತ್ತುಗಳಿದ್ದರೆ ಬ್ಯಾಟರಿ ಲೈಟನ್ನು ಉಪಯೋಗಿಸುವ ಆವಶ್ಯಕತೆಯಿರುತ್ತಿದ್ದಿಲ್ಲ.

### ಹೈದರಾಬಾದಿನ ಸ್ತ್ರೀ ಪೋಲೀಸರು?

ಕಾಂಗ್ರೆಸ್ ಚಳವಳಕಾರರನ್ನೆದುರಿಸಲು ಹೈದರಾಬಾದ್ ಸಂಸ್ಥಾನದವರು ಸ್ತ್ರೀ ಪೋಲೀಸರ ಒಂದು ದಳವನ್ನು ತರಬೇತುಗೊಳಿಸಿರುವುದರಿಂದ ಅಲ್ಲಿಯ ರಾಜಕಾರಣಿಗಳ ವಿಚಾರಶಕ್ತಿಯು ಹೇಗಿದೆಯೆಂದು ಸ್ಪಷ್ಟವಾಗುತ್ತದೆ.

ಇದು ಸರ್ ಅಕ್ಬರ್ ಹೈದರಿಗಳ ಸ್ವಂತ ಯೋಚನೆಯಾಗಿರಬಹುದು!

........

### ಕ್ರೈಸ್ತನ ಹೊಸ ಜೀವನ ಚರಿತ್ರೆ.

ಪ್ರಸಿದ್ಧ ಕಾದಂಬರಿಗಾರ ಮಿ| ಹಾಲ್ ಕೇನ್ ಎಂಬವರು “*Life of Christ*” ಎಂಬೊಂದು ಅತ್ಯಂತ ಚರ್ಚಾಸ್ಪದ ಪುಸ್ತಕವನ್ನು ಬರೆದಿರುವುದರಿಂದ ಇಂಗ್ಲೆಂಡಿನಲ್ಲಿ ದೊಡ್ಡ ಗಲಭೆಯುಂಟಾಗಿದೆಯಂತೆ. ಈ ಪುಸ್ತಕದಲ್ಲಿ ಹಳೆ ಮತ್ತು ಹೊಸ ಒಡಂಬಡಿಕೆಗಳ ಅಜ್ಞಕತೆಗಳನ್ನು ಅವರು ಸುಳ್ಳೆಂದು ವ್ಯಕ್ತಪಡಿಸಿರುವರಂತೆ. ಅವರ ಮಾತಿನಲ್ಲೇ ಹೇಳುವುದಿದ್ದರೆ “ಕ್ರಿಸ್ತನು ಜಗತ್ತಿಗೆ ಹೊಸ ತತ್ವವನ್ನು ಬೋಧಿಸಲಿಲ್ಲ, ಹೊಸ ವಿಧಾನಗಳನ್ನು ಕಲಿಸಲಿಲ್ಲ, ಹೊಸ ಮತವನ್ನು ಸ್ಥಾಪಿಸಲಿಲ್ಲ, ಹೊಸ ಇಗರ್ಜಿಗಳನ್ನು ನಿರ್ಮಿಸಲಿಲ್ಲ”ವೆಂದು ಅದರಲ್ಲಿ ಬರೆಯಲ್ಪಟ್ಟಿದೆ. ಕ್ರೈಸ್ತಬಾಂಧವರಿಗೆ ಇದೊಂದು ಹೊಸ ವಾರ್ತೆಯಾಗಿ ಕಾಣಬಹುದು!

# ಅವನೂ : : :
# : ಪಾಲುಗಾರ!

ತೆಲುಗು ಕತೆಯೊಂದರ
ಅನುಕರಣೆ.



“ಹೋ ಹೋ ಹೋ! ಚಂದ್ರಪುರದಿಂದಯಾವಾಗ ಬಂತು ಸವಾರಿ? ಒಟ್ಟಾರೆ ಬುಧದೆಸೆಯಪ್ಪಾ ನಿನ್ನದು! ಹ್ಯಾಗೆ ಚಂದ್ರಪುರ?’

ಇಷ್ಟನ್ನೂ ತೆರೆದ ಬಾಯಿಗೇ ಹೇಳಿ ಮುಗಿಸಿದ ರಾಮು. ಅಷ್ಟಕ್ಕೇ ನಿಲ್ಲಿಸಿದನೆ? “ಹ ಹ ಹ ಹ! ದೆಸೆಯಪ್ಪಾ-ನಿನ್ನ ದೆಸೆ!!” ಬಂದು ಬೆನ್ನು ತಟ್ಟಿ ನಗಲಾರಂಭಿಸಿದ. ನನ್ನ ಗುಟ್ಟು ಇವನಿಗೆ ತಿಳಿದಿದೆಯೆಂಬ ಸಂಶಯ ಫಕ್ಕನೆ ನನ್ನಲ್ಲೊಮ್ಮೆ ಮೂಡಿತು. ಆದರೆ ‘ಸಾಧ್ಯವಿಲ್ಲ’ ಎಂದು ಮರುಕ್ಷಣದಲ್ಲಿ ತೋರಿತು. “ಏನು ಏನಿದು? ಬಾ. ಕೂತುಕೋ. ತಮಾಷೆಯಿರಲಿ” ಎಂದು ಸ್ವಲ್ಪ ಸರಿದು ಕುಳಿತೆ. ಗಾಂಭೀರ್ಯವನ್ನು ತೋರಿಸಬೇಕೆಂದು ಪಟ್ಟ ನನ್ನ ಪ್ರಯತ್ನ ವ್ಯರ್ಥವಾಗಿ ಮೊಗದಲ್ಲಿ ವಿಜಯದ ಮುಗುಳುನಗೆಯುತ್ತು. “ನೋಡು ನಿನ್ನ ಮೊಗವನ್ನೊಮ್ಮೆ ನೋಡು. ಓಹೊ, ಭಾರಿ ಬದಲಾವಣೆಯಾದಂತೆ ಕಾಣುತ್ತದೆ!” ಎಂದು ರಾಮು ನನ್ನ ಮೊಗವನ್ನು ತಿರುಗಿಸಿಹಿಡಿದ. ಆಗ ನನಗೊಂದು ಸುಖದ ಸ್ಮರಣೆಯಾದಂತಾಗಿ ಆನಂದದ ನಗು ಬಂತು. ನಗುವ ಅವಸರದಲ್ಲೇ ಹೇಳಿದೆ:– “ಏನು ಹೇಳುತ್ತಿಯಪ್ಪಾ ನೀನು? ನನಗದರ ಅರ್ಥವೇ ಆಗವದಿಲ್ಲ”.

“ಬೇಡ ಬೇಡ-ಎಲ್ಲಾ ಬಲ್ಲೆ. ಚಂದ್ರಪುರದಲ್ಲಿ ಶ್ರೀನಾಥನ ಮನೆಯಲ್ಲಲ್ಲವೇ ನಿಂತದ್ದು? ಮಲಗಿದ್ದೆಲ್ಲಿ ಉಪ್ಪರಿಗೆಯಲ್ಲಲ್ಲವೆ?”

ಇನ್ನು ಗುಟ್ಟುಮಾಡಿ ಫಲವಿಲ್ಲವೆಂದುಕೊಂಡೆ. “ನಿನಗೆ ಹೇಗೆ ಗೊತ್ತು? ಓಹೊ! ನೀನೂ ಒಂದು ಸಲ ಹೋಗಿದ್ದಿಯಲ್ಲ!”

“ಹೌದು. ಆದ್ದರಿಂದಲೇ ನಿನಗೆ ಹೀಗೇನೆ ಆಗಿತ್ತೆಂದು ನನಗೆ ಗೊತ್ತು–ನನ್ನ ಹಾಗೆಯೇ ನಿನಗೂ ಆಗಿರಬೇಕೆಂದು ಗೊತ್ತು!”

ರಾಮು ಬೆನ್ನು ತಟ್ಟಿ ಒಂದೇಸವನೆ ನಗಲಾರಂಭಿಸಿದ ಇನ್ನೇನು? ಎಲ್ಲವೂ ಸ್ಪಷ್ಟವಾಯಿತು.. “ಅದಿರಲಿ ರಾಮು. ಆ ಶ್ರೀನಾಥನ ಅವಸ್ಥೆಯೇನು? ಅವ ಹಾಗೇಕೆ ಮಾಡುತ್ತಾನೆ? ಲೋಕದಲ್ಲಿ ಎಂಥೆಂಥಾ ಜನರಿದ್ದಾರಪ್ಪಾ! ರಾಮೂ, ನೀನು ಹೋದಾಗ ಏನು ನಡಿಯಿತು?’ ಎಂದೆ. ರಾಮು ಹೇಳಲಾರಂಭಿಸಿದ.

ಂಂ ಂಂ ಂಂ

ನಮ್ಮ ಮನೆಯ ವ್ಯಾಜ್ಯ ಚಂದ್ರಪುರಕ್ಕೆ ಟ್ರಾನ್ಸ್‌ಫರ್ ಆಗಿತ್ತಲ್ಲ. ಅದಕ್ಕಾಗಿ ಕಳದ ಫೆಬ್ರವರಿ ತಿಂಗಳಲ್ಲಿ ನಾನಲ್ಲಿಗೆ ಹೋಗಿದ್ದೆ. ಮುನ್ಸಿಫರಿಗೆ ಆ ದಿನ ತನಖಿಯ ನಂಬ್ರಗಳು ಹೆಚ್ಚಿದ್ದುವು. ನನ್ನ ನಂಬ್ರವನ್ನು ಮರುದಿನಕ್ಕಿಟ್ಟರು. ನಾನು ಕೋರ್ಟಿನಿಂದ ಹೊರಡುವಾಗ ನಾಲ್ಕು ಘಂಟೆಯಾಗಿರಬಹುದು. ಹೇಗೂ ಇನ್ನೊಂದು ದಿನ ದೂಡಬೇಕಲ್ಲ. ಎಂದು ಪೇಟೆಯನ್ನೆಲ್ಲಾ ತಿರುಗಿದೆ. ರಾತ್ರಿ ಹೋಟೆಲಿನಲ್ಲಿ ಕಳೆಯುವದೆಂದರೆ ಬೇಸರದ ಸಂಗತಿ—ಹಳೆಯ ಗುರುತದವನನ್ನು ಕಂಡು ಮಾತಾಡಿದ ಹಾಗಾಯಿತೆಂಬ ಆಶೆ ಬೇರೆ-ಹೀಗಾಗಿ ಸಂಜೆ ಶ್ರೀನಾಥನ ಬಿಡಾರಕ್ಕೆ ಹೋದೆ. ಅವ ಸಂತೋಷದಿಂದ ಬರಮಾಡಿಕೊಂಡು ಯೋಗಕ್ಷೇಮಗಳನ್ನು ವಿಚಾರಿಸಿದ. ರಾತ್ರಿ ಮೃಷ್ಟಾನ್ನ ಭೋಜನವೂ ಆಯಿತು.

‘ಆ ಮೇಲೆ ಏನಾಯಿತು ಹೇಳು. ನಿನ್ನನ್ನವ ಉಪವಾಸ ಹಾಕ

ಲಾರನೆಂದು ನನಗೆ ಗೊತ್ತಿದೆ!' ನಾನು ಮಧ್ಯದಲ್ಲಿ ಬಾಯಿ ಹಾಕಿದೆ.

"ಅವಸರ ಪಡಬೇಡ ಮಾರಾಯಾ! ನೀನು ಉಪವಾಸವಿದ್ದರಲ್ಲವೇ ನಾನು ಉಪವಾಸವಿರಬೇಕು!" ಹ ಹ ಹ- ಎಂದು ನಕ್ಕು ರಾಮು ಮುಂದರಿಸಿದ.

"ಕೇಳು ಊಟವಾದ ಮೇಲೆ ಶ್ರೀನಾಥ ಸ್ವತಃ ಹರಿವಾಣದಲ್ಲಿ ಬಾಳೆಹಣ್ಣು, ಕಿತ್ತಳೆ, ದ್ರಾಕ್ಷೆ, ಉತ್ತುತ್ತೆ ಮೊದಲಾದುವನ್ನು ತಂದಿಟ್ಟ-ಅದನ್ನೂ ಮುಗಿಸಿತು. ಆ ಮೇಲೆ ತಾಂಬೂಲ ಸೇವನೆಯಾಯಿತು. ಊರ ಸಮಾಚಾರ-ಸುಖ ಕಷ್ಟಗಳನ್ನೆಲ್ಲಾ ಮಾತಾಡಿ ಮುಗಿಸುವ ಹೊತ್ತಿಗೆ ಘಂಟೆ ಒಂಭತ್ತು ಹೊಡೆಯಿತು. 'ಇನ್ನು ಮಲಗುವ, ಆಗದೇ' ಎಂದ ಶ್ರೀನಾಥ. 'ಹೂಂ,' ಎಂದೆ ನಾನು. 'ಇವರನ್ನು ಉಪ್ಪರಿಗೆಯಲ್ಲಿ ಬಿಟ್ಟು ಬಾ'-ಮೂಲೆಯಲ್ಲಿ ನಿಂತಿದ್ದ ಚಾರಕನೊಡನೆ ಶ್ರೀನಾಥ ಹೇಳಿದ.

ದೂತ ಕದಲದೆ ನಿಂತಿದ್ದ. ನಮ್ಮ ಮಾತುಕತೆಯಿಂದ ಪುನಃ ಎರಡು ಮಿನಿಟುಗಳು ಕಳೆದವು. ಇನ್ನೊಮ್ಮೆ ಶ್ರೀನಾಥ ಹೇಳಿದ 'ಇವರನ್ನು ಉಪ್ಪರಿಗೆಯಲ್ಲಿ ಬಿಟ್ಟು ಬಾರೊ!'

ಚಾರಕ ಕೆಂಗಣ್ಣಿನಿಂದ ಒಮ್ಮೆ ಯಜಮಾನನನ್ನು ನೋಡಿ ದಡದಡನೇ ಎದ್ದು ಹೋಗಿಬಿಟ್ಟ. ನನಗೆ ಆಶ್ಚರ್ಯವಾಯಿತು. 'ಎಷ್ಟು ಸಲಿಗೆ ಅವನಿಗೆ!' ನೆನ್ನೊಳಗೇ ಅಂದುಕೊಂಡೆ. ಶ್ರೀನಾಥ ಮೂಲೆಯಲ್ಲಿದ್ದ ಲಾಂದರವನ್ನು ಹೊತ್ತಿಸಿ 'ಬನ್ನಿ ಮಲಗೋಣ' ಎಂದ. ನಾನು ಅವನ ಬೆನ್ನು ಹಿಡಿದೆ. ಉಪ್ಪರಿಗೆಯಲ್ಲಿ ನನ್ನನ್ನು ಬಿಟ್ಟು ಲಾಂದರವನ್ನು ಅಲ್ಲಿಯೇ ಇಟ್ಟು 'ಮಲಗಿಕೊಳ್ಳಿ' ಎಂದು ಶ್ರೀನಾಥ ಕೆಳಗಿಳಿದ.

೦೦೦ ೦೦೦ ೦೦೦

ಮಂಚದಲ್ಲಿ ಹಾಸಿಗೆ ಬಿಡಿಸಿಡಲ್ಪಟ್ಟಿತ್ತು. ನಾನು ಕುಳಿತುಕೊಂಡೆ. ಬೇಸಿಗೆಯ ರಾತ್ರಿಯಾದ್ದರಿಂದ ಮೈ ಉರಿಯುತಿತ್ತು. ದೀಪವನ್ನು ಸಣ್ಣದು ಮಾಡಿ ಬಾಗಿಲ ಕಡೆಯಿಂದ ಬೀಸುತ್ತಿರುವ ಗಾಳಿಗೆ ಮೈಯೊಡ್ಡಿ ಹಾಗೆಯೇ ಒರಗಿಕೊಂಡೆ. ತಲೆಯಲ್ಲಿ ಮರುದಿನದ ವ್ಯಾಜ್ಯದ ವಿಷಯವೇ ಸುಳಿಯುತಿತ್ತು.

ಹೀಗೆಯೇ ಅರ್ಧ ಘಂಟೆ ಕಳೆದಿರಬಹುದು. ನನ್ನ ಮೂಗಿಗೆ ಒಂದೇ ಸವನೆ ಹೂವಿನ ಸುವಾಸನೆ ಬರಹತ್ತಿತು. ಮೆಟ್ಟಲು ಹತ್ತಿ ಬರುವ ಶಬ್ದ-ಅದೂ ಕಾಲುಂಗುರವಿದ್ದ ಹೆಜ್ಜೆಯ ಶಬ್ದ! ನಾನು ಬಾಗಿಲು ಕಡೆಗೆ ನೋಡಹತ್ತಿದೆ. ಶ್ರೀನಾಥನ ಪತ್ನಿ ಒಳಬಂದು ಬಾಗಿಲಿನ ಚಿಲುಕ ಹಾಕಿಕೊಂಡಳು. ನನ್ನ ಎದೆಯ ಬಡಿತವು ಜೋರಾಯಿತು. "ಏನೋ ಕೆಲಸದಲ್ಲಿ ಬಂದಿರಬೇಕು" ಎಂದು ತೋರಿತೊಮ್ಮೆ. "ಬಾಗಿಲು ಹಾಕಿಕೊಂಡಳೇಕೆ?" "ಏನಾದರೂ ಬಯಕೆಯಿಂದಲೇ ಬಂದು ಬಿಟ್ಟಳೆ?" 'ಶ್ರೀನಾಥ ಕೆಳಗೇ ಇದ್ದಾನಲ್ಲ?' ಹೀಗೆಲ್ಲಾ ಹೊಳೆದವು. ಲಕ್ಷ್ಮಿ ಬಂದು ನನ್ನ ಮಂಚದಿದಿರಿನಲ್ಲಿ ಕಂಬವನ್ನು ಆನಿಸಿಕೊಂಡು ತಲೆ ಬಗ್ಗಿಸಿ ನಿಂತುಕೊಂಡಳು. 'ಏನು ಬಂದಿರಿ?' ನಾನು ಮೃದುವಾಗಿ ಕೇಳಿದೆ. ತಲೆಯೆತ್ತಿ ನನ್ನನ್ನು ನೋಡಿ ಮುಗುಳು ನಕ್ಕಳು. ಆ ಕ್ಷಣದಲ್ಲಿ ಮಿಕ್ಕ ಸಂಶಯಗಳೆಲ್ಲಾ ತೊಲಗಿ ಎದ್ದು ಕುಳಿತೆ. "ನಿಂತುಕೊಂಡಿರಲ್ಲ!" ಉದ್ವೇಗಬೆರೆತ ಧ್ವನಿಯಲ್ಲಿ ಹೇಳಿದೆ. ಅವಳು ಸೀದಾ ಬಂದು ಹಾಸಿಗೆಯಲ್ಲಿ ಕುಳಿತುಕೊಂಡಳು. ಏನು ಹೇಳುವಳೋ ಎಂದು ನಾನವಳ ಮುಖ ನೋಡುತ್ತಿದ್ದಂತೆಯೇ ಅಲ್ಲಿಯೇ ಮೈನೀಡಿ ನನ್ನ ತೊಡೆಗಳ ಮೇಲೆ ತಲೆಯಿಟ್ಟಳು. ಮುದ್ದು ಮುದ್ದಾದ ಮುಖವನ್ನು ನೋಡುತ್ತಾ ಹೇಳಿದೆ—" ಸಂಗತಿ ಶ್ರೀನಾಥರಾಯರಿಗೆ ಗೊತ್ತಾದರೆ?"

"ಏನೂ ಹೆದರಿಕೆಯಿಲ್ಲ!" ಅಂಗಾತ ಮಲಗಿದ್ದ ಲಕ್ಷ್ಮಿ ತಲೆಯಲ್ಲಾಡಿಸಿ ಹೇಳುವಾಗ ಮುಡಿಯಲ್ಲಿದ್ದ ಜಾಜಿ ಹೂವಿನ ಚೆಂಡು ನನ್ನ ತೊಡೆಗೆ ಜಜ್ಜಿದಂತಾಯಿತು. ಆದರೆ ಅವಳು ಹೂವಿನ ಆಸೆಬಿಟ್ಟಿದ್ದಳು!

"ಅಂದರೆ ಅವರಿಗಿದು ಗೊತ್ತಿದೆಯೆ?"

"ಹೌದು!"

'ಹ್ಞಾ! ಅವರ ಒಪ್ಪಿಗೆಯಿದೆಯೆ?' ಲಕ್ಷ್ಮಿ 'ಇದೆ' ಎಂಬರ್ಥ ಬರುವಂತೆ ತಲೆಯಲ್ಲಾಡಿಸಿದಳು.

ಆ ಮೇಲೆ ನನ್ನ ಪ್ರಶ್ನೆಯೂ ಇಲ್ಲ, ಅವಳ ಉತ್ತರವೂ ಇಲ್ಲ; ನಮ್ಮ ತುಟಿಗಳಿಗೆ ಬೇರೆ ಕೆಲಸವಿತ್ತು!.......

ಐದು ಮಿನಿಟಾಗಿರಬಹುದು. ಡಬಡಬನೇ ಮೆಟ್ಟಲು ಹತ್ತಿ ಬರುವ ಸದ್ದು ಕೇಳಿಸಿತು. ನಾನು ಭಯಗೊಂಡೆ. 'ಶ್ರೀನಾಥನಿರಬೇಕು, ಸಿಕ್ಕಿಬಿದ್ದೆನಲ್ಲಾ!' ಎಂದು ಹೃದಯವು ಬಡಿಯಹತ್ತಿತು. 'ಆದರೆ ನನ್ನದೇನು ತಪ್ಪಿದೆ? ಅವನೇ ಇಲ್ಲಿ ಮಲಗಿಸಿ ಹೋಗಿದ್ದ. ನಾನು ಆ ಸ್ಥಳ ಬಿಟ್ಟಿಲ್ಲ. ಅವನ ಹೆಂಡತಿ ಬಂದು ಇಷ್ಟೆಲ್ಲಾ ಮಾಡಿದರೆ ಅದ

ರಲ್ಲಿ ನನ್ನ ತಪ್ಪೇನು?" ಈ ಆಧಾರ ದಿಂದ ಧೈರ್ಯ ತಂದುಕೊಂಡೆ. ಬಾಗಿಲ ಬಳಿ ಯಾರೋ ಬಂದು ನಿಂತಿದ್ದಾರೆಂದು ಭಾಸವಾಯಿತು. ಕಟಕಟನೇ ಹಲ್ಲು ಕಡಿಯುವದು ಕೇಳಿಸಿತು. 'ಎಂಥಾ ಅವಸ್ಥೆಯಿದು. ಶ್ರೀನಾಥನಾದರೆ ಹೀಗೇಕೆ ಮಾಡ ಬೇಕು? ಅವನಿಗೆ ತನ್ನ ಹೆಂಡತಿ ಯೆಂದರೆ ಇಷ್ಟು ಹೆದರಿಕೆಯೇನು?

ಒಡನೆ ಬಾಗಿಲು ದೂಡಿದ ಹಾಗಾ ಯಿತು. ಒಂದು, ಎರಡು, ಮೂರು ಸಲವಾಯಿತು. ಪುನ: ಬಾಗಿಲ ಬಳಿ ಹಲ್ಲು ಕಡಿಯುವ ಶಬ್ದ- ಬಾಗಿಲು ದೂಡುವ ಶಬ್ದ. ನಾನು ಅವಳ ತೋಳ ಸೆರೆಯಿಂದ ಬಿಡಿಸಿಕೊಂಡು ಬಾಗಿಲು ತೆರೆಯುವೆನೆಂದು ಏಳಲು ಪ್ರಯತ್ನಿಸಿದೆ. ಆದರೆ ಲಕ್ಷ್ಮಿ ನನ್ನನ್ನು ಬಿಡಲಿಲ್ಲ. ಬಾಗಲ ಕಡೆಗೆ ಮುಖ ಮಾಡಿ 'ನಿನಗೆ ಕೆಳಗೆ ಹೋಗಲಿ ಕ್ಕಾಗುವದಿಲ್ಲವೇ?' ಎಂದಳು. ಐದು ಮಿನಿಟು ನಿಶ್ಶಬ್ದ, ಪುನಃ ಹಲ್ಲು ಕಡಿ ಯುವ ಶಬ್ದ. 'ಏನೋ ಹೇಳಿದ್ದು ಕೇಳಲಿಲ್ಲವೇನೋ? ನಡಿಯುತ್ತೀ ಇಲ್ಲಾ ಇಲ್ಲಿಂದ?' ಲಕ್ಷ್ಮಿ ಬಿರುಸಾ ಗಿ ಹೇಳಿದಳು. ಎರಡು ಮಿನಿಟು ಪುನಃ ನಿಶ್ಶಬ್ದ. ಆ ಮೇಲೆ ದಡ ಬಡನೇ ಮೆಟ್ಟಲು ಇಳಿದು ಹೋ ಗುವ ಸದ್ದು.

ಆ ರಾತ್ರಿ ನಾನು ಪಟ್ಟ ಸುಖ ವನ್ನು ಬೇರೆ ವರ್ಣಿಸಲಾರೆ. ಮುಂಜಾನೆ ಹಾಸಿಗೆ ಬಿಡಲೆದ್ದಾಗ ಲಕ್ಷ್ಮಿ ನನ್ನ ಕೈಹಿಡಿದು ಹಿಂದಕ್ಕೆ ಳೆದಳು. ನಾನು ಹಿಂದೆ ಜಗ್ಗಿ ಕುಳಿತೆ. ಲಕ್ಷ್ಮಿ ಹಾಯಾಗಿ ಹಾಸಿಗೆ ಹಿಡಿದಿದ್ದಳು. ಅವಳ ಕಣ್ಣುಗಳು ಮಂದವಾಗಿದ್ದುವು. ಮುಖದಲ್ಲಿ ತೃಪ್ತಿಯ ಚಿಹ್ನೆಯಿತ್ತು.

"ನನಗೀಗ ಹೋಗಬೇಕು" ಎಂದೆ.

"ಆಗುವದಿಲ್ಲ!"

"ಕೋರ್ಟಿನಲ್ಲಿ ನಂಬ್ರವಿದೆ. ಈಗ ವಕೀಲರಲ್ಲಿ ಹೋಗಬೇಕು. ನಂಬ್ರ, ತೀರಿದೊಡನೆ ಊರಿಗೆ ಹೋಗಿ ಬಿಡುತ್ತೇನೆ"

"ಬೇಡ!"

"ಬೇ......ಡ!"

"ಊ ಹೂಂ!"

ಲಕ್ಷ್ಮಿ ಎದ್ದು ಗೋಡೆಗೆ ತೂಗ ಹಾಕಿದ್ದ ನನ್ನ ಕೊಡೆಯನ್ನು ತೆಗೆದು ಹಿಡಿದುಕೊಂಡಳು.

"ನನಗೆ ಊರಲ್ಲಿ ಕೆಲಸವಿದೆ ಲಕ್ಷ್ಮಿ! ಹೋಗಲೇಬೇಕು!"

"ನಾಳೆ ಹೋಗಬಹುದು. ಈವ ತ್ತೊಮ್ಮೆ ಬನ್ನಿ!"

ನನ್ನನ್ನೊಮ್ಮೆ ಆಶಾಪೂರ್ಣ ದೃಷ್ಟಿಯಿಂದ ನೋಡಿ ತಲೆ ತಗ್ಗಿ ಸಿದಳು. ಅವಳ ಕಣ್ಣು ತ.ಟಿಗಳಲ್ಲಿ ಪ್ರೇಮವು ಕುಣಿಯುತಿತ್ತು. ನಾನು ಸೋತುಹೋದೆ.

"ಹೂಂ. ಸಂಜೆ ಬರುತ್ತೇನೆ"

"ಸತ್ಯವೇ? ನನ್ನ ಕುತ್ತಿಗೆಗೆ ಕೈ ಯಿಟ್ಟು ಹೇಳಿ!"

ನಾನು ಕುತ್ತಿಗೆಗೆ ಕೈಯಿಟ್ಟ ಮೇ ಲೆಯೇ ಕೊಡೆಕೊಟ್ಟಳು. ಶ್ರೀನಾಥ ನೊಡನೆ ಸಂಜೆಗೆ ಬರುತ್ತೇನೆಂದು ಹೇಳಿ ವಕೀಲರಲ್ಲಿಗೆ ಹೋದೆ.

ಮಧ್ಯಾಹ್ನ ಕೋರ್ಟಿನ ವಠಾರ ದಲ್ಲಿ ಶ್ರೀನಾಥನ ಸುನೆಯು ಕೆಲಸ ದವ ಸಿಕ್ಕಿದ. ನನ್ನನ್ನು ಕಂಡವ ಮುಖ ಕಪ್ಪು ಮಾಡಿಕೊಂಡು "ನಿಮ್ಮ ಕೆಲಸ ಆಗಲಿಲ್ಲವೇ?" ಎಂ ದ. ಎಲಾ! ದೊಡ್ಡ ರಾಜನ ಹಾಗೆ ವಿಚಾರಿಸುತ್ತಾನೆ! 'ನಿನಗೆ ಅದೆಲ್ಲ ಯಾಕೆ?' ಎಂದೆ. 'ಯಾಕೊ? ಹೋಗಿ ಹೋಗಿ! ಒಳ್ಳೆಯ ಮಾತಿ ನಿಂದ ಊರಿಗೆ ಹೋಗಿ ಬಿಡಿ! ಇಲ್ಲ ವಾದರೆ ತೊಂದರೆ ಬಂದೀತು!'

'ಏನೋ, ತಲೆತುಂಬಾ ಮಾತ ನಾಡುತ್ತಿರುವಿ? ನಿನ್ನ ಕೆಲಸವೇನು- ನೀನೇನು! ನಡೀ ನೋಡುವಾ!' ಚಾರಕನನ್ನು ಗದರಿಸಿ, ಇದು ಸಲಿ ಗೆಯ ಪರಿಣಾಮವೆಂದುಕೊಂಡೆ.

ಆ ರಾತ್ರಿಯೂ ನಾನು ಅವರ ಬಿಡಾರಕ್ಕೆ ಹೋದೆ. ಊಟ ತೀ ರಿಸಿ ಉಪ್ಪರಿಗೆಗೆ ಹೋಗುವ ಹೊ ತ್ತಿಗೆ ಶ್ರೀನಾಥನ ಮುಖ ನೋಡು ವಾಗ ನಾಚುಗೆಯಾಗುತ್ತಿತ್ತು. ಆದರೇನು? ನಾನು ಆ ರಾತ್ರಿ ಪಟ್ಟ ಸುಖವು ಜೀವಮಾನದಲ್ಲಿ ಬಹಳ ಸಲ ಸಿಗಲಾರದು. ಮುಂಜಾನೆ ನಾನು ಬೇಗನೆ ಏಳುವಾಗ ಲಕ್ಷ್ಮಿಗೆ ಜೊಂಪು ಹತ್ತಿತ್ತು. ಬೆಳಗಾಗುವ ಹೊತ್ತಿಗೆ ಹಿಡಿದ ನಿದ್ರೆ- ನಾನು ಅವಳ ಗಲ್ಲವನ್ನು ಹಿಡಿದಲುಗಿಸಿದೆ. ಲಕ್ಷ್ಮಿ ಮೈ ಕೊನರಿಸುತ್ತಾ ಎದ್ದಳು.

"ಈ ದಿನವಾದರೂ ನಾನು ಹೋಗಬಹುದಲ್ಲ!"

ಎರಡೂ ಕೈಗಳಿಂದ ಕಣ್ಣುಗ ಳನ್ನುಜ್ಜಿಕೊಂಡು ಲಕ್ಷ್ಮಿಯೊಮ್ಮೆ ನಕ್ಕಳು. ಮೊಗದಲ್ಲೊಂದು ನವೀನ ಕಾಂತಿಯಿತ್ತು. ಕೃತಜ್ಞತೆಯ ದೃಷ್ಟಿಯಿಂದ ನನ್ನನ್ನು ನೋಡಿ ದಳು. "ಹೋಗಲೇ ಬೇಕೆ?" "ಈ ದಿನವೂ ಬೇಡವೆ?" ನಾನೆಂದೆ.

ಲಕ್ಷ್ಮಿಯೆದ್ದು ಗೋಡೆಗೆ ತಗಲಿ ಸಿದ್ದ ನನ್ನ ಕೋಟನ್ನು ತೆಗೆದಳು, ಹಾಗೆಯೇ ಕಿಸೆಗೆ ಕೈಹಾಕಿದಳು, ಪಾಕೀಟನ್ನು ತೆಗೆದಳು, ಅದರೊಳ ಗಿದ್ದ ನೋಟು ರೂಪಾಯಿಗಳನ್ನೆಲ್ಲಾ ಸುರುವಿಕೊಂಡಳು! ನಾನು ಅವ ಳನ್ನೇ ನೋಡುತ್ತಾ ಕುಳಿತಿದ್ದೆ. "ಈ ಐದು ರೂಪಾಯಿ ನಿಮ್ಮ ಖರ್ಚಿಗೆ- ಸಾಕಲ್ಲ! ನೋಡಿ" ಎಂದು ಒಂದು ನೋಟನ್ನೆತ್ತಿ ತೋರಿಸಿ ಪಾಕೀಟ

ನೊಳಗೆ ಹಾಕಿ, ಬಾಕಿ ನೂರೊಂದು ರೂಪಾಯಿಯನ್ನೂ ಹಿಡಿದುಕೊಂಡಳು. ಆಟವಾಡುತ್ತಾ ಮತ್ತೂ ಸ್ವಲ್ಪ ಸಮಯ ನನ್ನನ್ನು ನಿಲ್ಲಿಸಿಕೊಂಡಳು.

೦೦೦ ೦೦೦ ೦೦೦

ಲಕ್ಷ್ಮಿಯನ್ನು ಬೀಳ್ಕೊಂಡು, ಶ್ರೀಧರನಿಗೆ ಹೇಳಿ ಊರಿಗೆ ಹೊರಡಲು ಬಸ್ ಸ್ಟೇಶನ್ ಕಡೆಗೆ ಹೊರಟೆ. ತಲೆಯಲ್ಲಿ ಲಕ್ಷ್ಮಿಯೊಬ್ಬಳೇ ಇದ್ದಳು. 'ಶ್ರೀನಾಥನ ಅವಸ್ಥೆಯೇನಿದು? ನನ್ನ ನೂರೊಂದು ರೂಪಾಯಿ ಒಳಗೆ ಹಾಕಿ ಬಿಟ್ಟಳಲ್ಲಾ ಪೋರಿ! ಗಂಡಹೆಂಡಿರಿಬ್ಬರೂ ಈ ವಿದ್ಯೆಯಿಂದ ಹಣ ಮಾಡಲು ಹೊರಟಿರುವರೋ ಹೇಗೆ?'' ಹೀಗೆ ಯೋಚನೆ ಬಂತೊಮ್ಮೆ. ''ಛೆ! ಲಕ್ಷ್ಮಿಯಂತಹ ಪ್ರೇಮಮಯಿಯೂ ಹಣಕ್ಕಾಗಿ ಹಾಗೆ ಮಾಡಿಯಾಳೆ? ಈ ಎರಡು ರಾತ್ರಿ ಅವಳು ಕೊಟ್ಟ ಸುಖವು ಹಣದ ಬೆಲೆ ಬಾಳುವ ಜಾತಿಯವುಗಳೆ?'' ಎಂದು ಹೃದಯದಲ್ಲಿ ಭರತವೇರಿತೊಮ್ಮೆ! ''ಹೇಗಾದರೂ ನೂರೊಂದು ರೂಪಾಯಿ ಹೋಯಿತಲ್ಲಾ—ಊರಿಗೆ ಹೋಗಿ ಮುಟ್ಟುವ ವರೆಗಾದರೂ ಸಾಕಾಗಬಹುದೆ?" ಎಂದು ಪಾಕೀಟ ತೆಗೆದು ನೋಡುತ್ತೇನೆ-ನೋಟು ನಾಣ್ಯವೆಂದು ನೂರಾರು ರೂಪಾಯಿಗಳೂ ಅದರೊಳಗಿವೆ! ''ಎಲ್ಲವನ್ನೂ ಹಾಗೆಯೇ ಇಟ್ಟಿದ್ದಾಳೆ ಹುಚ್ಚಿ! ರೂಪಾಯಿ ತೆಗೆದು ಆಟವಾಡಿದ್ದಷ್ಟೆ, ಏ ಪೋರಿ!"

ಇದು ನಡೆದು ನಾಲ್ಕು ತಿಂಗಳಾಯಿತು ನೋಡು-ಈಗಲೂ ಆ ಸುಖ ನಿನ್ನೆ ಅನುಭವಿಸಿದಂತೆ ಕಾಣುತ್ತಿದೆ ನನಗೆ''.

೦೦೦ ೦೦೦ ೦೦೦

ರಾಮು ಇಷ್ಟನ್ನು ಹೇಳಿ ಮುಗಿಸಿದ ''ಅದಿರಲಿ, ಆಚಾಕರಿಯವನಿಗೇನು ಅದರಲ್ಲಿ ಅಷ್ಟು ಹೊಟ್ಟೆನೋವು?' ಎಂದು ನಾನು ಕೇಳಿದೆ. ''ಅವನೂ ಒಬ್ಬ ಪಾಲುಗಾರ. ಮೊನ್ನೆ ನೀನು ಹೋದಿ-ಆ ದಿನ ನಾನು ಹೋಗಿದ್ದೆ. ನಿನ್ನ ನನ್ನಂಥವರು ಹೊಸತಾಗಿ-ಇಲ್ಲವೇ ರುಚಿತಾಗಿ ಆಗಾಗ ಹೋಗುವವದಿರಬಹುದು. ಆದರೆ ಪ್ರತಿದಿನವೂ ಇದ್ದೇ ಇರುತ್ತಾರೆಯೇ? ಯಾರೂ ಇಲ್ಲದ ರಾತ್ರಿ 'ಅಮ್ಮಾಪ್ರಿಗೆ ಏನು ಬೇಕಂತೆ, ಕೇಳು!' ಎಂದು ಆ ಕೆಲಸದವನನ್ನೇ ಹೇಳುತ್ತಾನೆ ಶ್ರೀನಾಥ. ರುಚಿತಾಗಿಬಿಟ್ಟಿದೆ – ಬೇರೆ ಯಾರಾದರೂ ಹೋದರೆಂದರೆ ಅವನ ಸಿಟ್ಟೋ ಸಿಟ್ಟು. ಅವ ಏನು ಮಾಡಿದರೂ ಶ್ರೀನಾಥ ತುಟಿಯೆತ್ತುವದಿಲ್ಲ. ಮನೆಯಲ್ಲಿ ಸ್ವಲ್ಪ ಕೆಣಕಿದರೆಂದರೆ 'ನಿಮ್ಮ ಮನೆಯಿಂದ ಈಗಲೇ ಹೊರಟೆ.' ಎನ್ನುತ್ತಾನೆ. ಹೊರಗೆ ಹೋಗಿ ಎಲ್ಲಾ ಪಬ್ಲಿಷ್‌ಮಾಡಿ ಬಿಟ್ಟರೆ? ಆದ್ದರಿಂದ ಅವನಿಗೆ ಸಿಟ್ಟೆನ್ನುವವರಿಲ್ಲ!" ಎಂದ ರಾಮು.

''ರಾಮ ರಾಮ! ಹೀಗಿದ್ದ ಮೇಲೆ ಶ್ರೀನಾಥ ಮದುವೆಯಾದುದೇಕೆ ಹೇಳು?''

'ಮದುವೆಯಾದುದು ಅವನ ಕರ್ಮಕ್ಕೆ!"

—ವಿ. ಹೆ.

# ಪುರಾಣಗಳ ನವಶೋಧನೆ

ಅಂತರಂಗದ ವಾಚಕರಿಗೆ ಗೆಳೆಯರೊಬ್ಬರು 'ಗಮನಿಸತಕ್ಕ ವಿಷಯ'ಗಳ ಕುರಿತು ಬರೆದ ಲೇಖನಮಾಲೆಯನ್ನು ಓದಿರಬಹುದಾದ ವಾಚಕರ ಪೈಕಿ ಬೀಡಿ, ನಸ್ಯ, ಚಹಾ ವೊದಲಾದವುಗಳ ಅಭ್ಯಾಸವಿರುವವರಿಗೆ ಬಹಳ ಸಿಟ್ಟು ಬಂದಿರಬಹುದು. ಆದರೆ ಅವರು ಆ ರೀತಿ ಸಿಟ್ಟುಗೊಳ್ಳುವ ಅವಶ್ಯಕತೆಯು ಇರುವುದಿಲ್ಲ. ಏಕೆಂದರೆ ಈ ಅಭ್ಯಾಸಗಳು ಅನಾದಿಯೆಂತಲೂ, ಆರೋಗ್ಯಕರವಾದವುಗಳೆಂತಲೂ, ಪವಿತ್ರ ಮತ್ತು ಮಾನವನ ಕರ್ತವ್ಯಗಳೆಂತಲೂ ನಮ್ಮ ಮುತ್ತಜ್ಜನ ಪುರಾಣಸಂಗ್ರಹದಿಂದ ನನಗೆ ಕಂಡುಬಂದಿದೆ. ಅದರ ಪೈಕಿ ಬೀಡಿ ವಗೈರೆ ಧೂಮ್ರಪಾನದ ವಿಷಯ ಸಾಕಷ್ಟು ಆಧಾರಗಳನ್ನು "ಧೂಮ್ರ ಪುರಾಣದಿಂದ" ಎತ್ತಿ ನಮ್ಮ ಬೀಡಿ ಭಕ್ತರಿಗಾಗಿ ಪ್ರಕಟಿಸಿರುತ್ತೇನೆ.

ಇದೇ ರೀತಿ ನಸ್ಯ, ಚಹಗಳ ವಿಷಯವೂ ಮುಂದೆ ಸಮಯ ದೊರೆತಾಗ ಪುರಾಣಗಳ ಶೋಧೆ ನಡೆಸಿ ವಾಚಕರಿಗಾಗಿ ಪ್ರಕಟಿಸುವೆನು.

ಇತಿ

**ನೀಲಕಂಠ ರಾಮವರ್ಮ ಶಾಸ್ತ್ರಿ**

ವಿದ್ಯಾದಿಗ್ಗಜ, ಪುರಾಣಾಚಾರ್ಯ ಇತ್ಯಾದಿ (ಬಿದಿರುಗಳು.)

ಮೊದಲನೆಯದಾಗಿ ಧೂಮ್ರಸೇವನೆಯು ಅನಾದಿ (ಅಂದರೆ ಆದಿ ಅಂತ್ಯವಿಲ್ಲದ್ದು) ಎಂಬುದಕ್ಕೆ ಮುಖ್ಯವಾಗಿ ಜಗತ್ತಿನಲ್ಲಿಯೇ 'ಅನಾದಿ'ಯೆಂದು ಸ್ಥಾಪಿಸಲ್ಪಟ್ಟಿರುವ ನಮ್ಮ ವೇದಗಳ ಪೈಕಿ ಋಗ್ವೇದದಲ್ಲಿ 'ಧೂಮ್ರ ಸೇವನೆಯ' ವಿಷಯವಾಗಿ ಈ ರೀತಿ ಬರೆದಿರುತ್ತದೆ.

'|| ಸರ್ವಂ । ಧೂಮ್ರಮಯಂ । ಜಗತ್ ||'

(ಅಧ್ಯಾಯ ½ ಶ್ಲೋಕ ¼)

ಅರ್ಥಾತ್ ಇಡೀ ಜಗತ್ತು ಹೊಗೆಯಿಂದ ತುಂಬಿದೆ. ಜಗತ್ತಿನಲ್ಲಿ ತುಂಬಿರುವ ಹೊಗೆಯು ಯಾವದು? ಎಂಬುದನ್ನು ನಾವೀಗ ಚರ್ಚಿಸಬೇಕಾಗಿದೆ. ಅದು ಹಂಚು ಕಾರ್ಖಾನೆಯ ಚಿಮಿಣಿಗಳಿಂದ ಹೊರಡತಕ್ಕ ಹೊಗೆಯುಲ್ಲ. ಯಾಕಂದರೆ ವೇದಕಾಲದಲ್ಲಿ ಮಾನವನು ಗುಹೆಗಳಲ್ಲಿ ವಾಸಿಸುತ್ತಿದ್ದನೆಂದೂ ಹಂಚು ಕಾರ್ಖಾನೆಗಳು ಆ ಸಮಯ ಇರಲಿಲ್ಲನೆಂದೂ ಮೆ| ಮಾಕ್ಸಿಮುಲ್ಲರ ಸಾಹೇಬರು ಬರೆದ ಹಿಂದೂದೇಶದ ಚರಿತ್ರೆಯಿಂದ ಗೊತ್ತಾಗುತ್ತದೆ. ಮತ್ತು ಹೋಮಗಳಿಂದ ಹೊರಡತಕ್ಕ ಹೊಗೆಯಾಗಿರಲಿಕ್ಕೂ ಸಾಧ್ಯವಿಲ್ಲ. ಯಾಕಂದರೆ ಹೋಮಗಳಿಗೆ ಆ ಕಾಲದಲ್ಲಿ ಮಣ ಮಣ (ಮಂತ್ರವಲ್ಲ) ತುಪ್ಪ ಸುರಿಸುತ್ತಿದ್ದ ಕಾರಣ ಹೊಗೆಯೇಳುವ ಸಂಭವನೇ ಇರುವುದಿಲ್ಲ. ಆದ್ದರಿಂದ ಆ ಹೊಗೆಯು ಬೀಡಿ ಸಿಗರೇಟು ಚುಟ್ಟಾ ಮತ್ತು ಗುಡುಗುಡಿ ಇವುಗಳ ಹೊಗೆಯೇ ಇರಬೇಕು ಎಂದು ಇತ್ಯರ್ಥಿಸಬಹುದು.

ಎರಡನೇಯದಾಗಿ ನಮ್ಮ ಪೂರ್ವಜರಾದ ಯೋಗ್ಯ ಋಷಿಗಳು ಕೂಡಾ ಧೂಮ್ರಪಾನ ಮಾಡುತ್ತಿದ್ದರೆಂದು "ಋಸಿಪಂಚವಿೂವೃತ" ದಲ್ಲಿ "ಋಷಿಸಂವಾದ" ಯೆಂಬ ಅಧ್ಯಾಯದಲ್ಲಿ ಹೇಳಲ್ಪಟ್ಟ "ವ್ಯಾಸೋ ವಶಿಷ್ಠ: ಸಿಗಾರ್ ತಾರಂ|| ಎಂಬ ಶ್ಲೋಕದಿಂದ ತಿಳಿದುಬರುತ್ತಿದೆ. ಆ ಶ್ಲೋಕದಲ್ಲಿ ಹೇಳಲ್ಪಟ್ಟ ಸಿಗಾರ್ ಎಂಬುದು ಒಂದು ವಿಜಾತೀಯವಾದ ಬೀಡಿಯಿರಬಹುದು. "ವ್ಯಾಸರು ವಸಿಷ್ಠರೊಡನೆ ಒಂದು 'ಸಿಗಾರ್' ಕೊಡಿ"ಯೆಂದು ಕೇಳಬೇಕಾದರೆ ಅವರಿಬ್ಬರೂ ಧೂಮ್ರಪಾನ ಮಾಡುವವರಾಗಿರಲೇಬೇಕೆಂಬುದಕ್ಕೆ ಸಂಶಯವಿರುವುದಿಲ್ಲ. ಆದ್ದರಿಂದ ಧೂಮ್ರಪಾನವು ಅನೇಕ ಶತಮಾನ ಮನ್ವಂತರಗಳ ಹಿಂದೆಯೂ ಪ್ರಚಾರದಲ್ಲಿತ್ತೆಂದು ಸ್ಪಷ್ಟವಾಗುತ್ತಿವೆ.

ಮೂರನೆಯದಾಗಿ ಆರೋಗ್ಯದೃಷ್ಟಿಯಿಂದ ಕೂಡ ಧೂಮ್ರ ಸೇವನೆಯು ಒಳ್ಳೆಯ ಪರಿಣಾಮಕಾರಿಯೆಂದು ಮಿಸ್ಟರ್ ಪುರಂದರ ದಾಸರೆಂಬ ಭಾರಿ ಪಂಡಿತರು ಬರೆದಿರುವ "ಗುಡು ಗುಡಿಯನು ಸೇದಿ ನೋಡು | ನಿನ್ನ ವಡಲೊಳಗಿಹ ರೋಗವನೀಡಾಡು ||೧|| " ಎಂಬ ಪದ್ಯದಿಂದ ಗೊತ್ತಾಗುತ್ತಿದೆ. ಮೇಲಿನ ಪದ್ಯದಲ್ಲಿ ಗುಡುಗುಡಿಯೆಂಬ ತರದ ಧೂಮ್ರಪಾನವು ವಡಲ ರೋಗ (ಒಳ ಜ್ವರ)ಕ್ಕೆ ಅತ್ಯಂತ ಗುಣಕಾರಿ ಎಂತ ತಿಳಿಯುತ್ತದೆ.

ಇನ್ನು ವ್ಯಾಸಕುಮಾರ ರಚಿತ ಅದ್ಭುತ ರಾಮಾಯಣದಲ್ಲಿ ಕವಿಯು ಬೀಡಿಯ ವಿಷಯವಾಗಿ ಬರೆದಿರುವ

ವರ್ಣನೆಯನ್ನು ನೋಡಿದರೆ ನಿಜವಾಗಿ ಧೂಮ್ರಪಾನದಲ್ಲಿ ಬಹಳ ಮಹತ್ವವಿರುತ್ತದೆಂಬುದನ್ನು ಆವಾವ ನಾಸ್ತಿಕನೂ ಒಪ್ಪಲೇ ಬೇಕು.

(ಪದ)

ಬೀಡಿಯೇ ನಿನ್ನನು |
ದ್ಧಾಡಿಯೇ ಯುವಕ ಜನ ಪಾವನತ್ವವ ಪಡೆವದೇ ||
ನಿನ್ನ ಸೇವಿಸೆ ಪೋಗಿ |
ಮುನ್ನ ಮಾಡಿದ ಕರ್ಮ |
ಜನ್ಮ ಸಾರ್ಥಕವಪ್ಪುದೇ || ೧ ||

(ಅದ್ಭುತ ರಾಮಾಯಣದಿಂದ)

ಕೊನೆಯದಾಗಿ ಬಣಸ್ಮೃತಿಯಲ್ಲಿ ದಾನಗಳ ವಿಷಯವಾಗಿ ಬಣಮಹಾರಾಜರು ಹೇಳಿರುವ ಆದೊಂದು ಶ್ಲೋಕವನ್ನು ಶೌಚ ಮಹಾಮುನಿಗಳು ತಮ್ಮ ಶಿಷ್ಯರಾದ ಶ್ವಾನಕವೃಂದಕ್ಕೆ ಹೇಳಿರುವುದನ್ನು ಇಲ್ಲಿ ಉಲ್ಲೇಖಿಸಿ ನನ್ನ ಈ ಧೂಮ್ರ ಪುರಾಣದ ಶೋಧನೆಯನ್ನು ಮುಗಿಸುವೆನು.

**ಶ್ಲೋಕ.**

ಬೀಡಿ ದಾನಂ| ಮಹಾ ದಾನಂ||
ಬೀಡಿ ದಾನಂ| ಮೋಕ್ಷ ಸಾಧನಂ||
ಗೋ ದಾನೇನ| ಯತ್ಫಲಂ ಲಭ್ಯಂ||
ಬೀಡಿ ದಾನೇನ| ಲಭ್ಯತೇ|| || ೧ ||

**ಅರ್ಥ**:- ಬೀಡಿದಾನವು ಎಲ್ಲಾ ದಾನಗಳಿಗಿಂತಲೂ ಶ್ರೇಷ್ಠವಾದದ್ದು. ಬೀಡಿದಾನವು ಮೋಕ್ಷಮಾರ್ಗವಾದ್ದು. ಗೋದಾನದಿಂದ ಯಾವ ಫಲವು ಸಿಕ್ಕುತ್ತದೋ ಅದೇ ಫಲವು ಬೀಡಿದಾನದಿಂದ ಸಿಕ್ಕುತ್ತದೆ.

---

**ಬಲಶಾಲಿ!**

ರಾಮು: ನನ್ನಪ್ಪ ಪೋಲಿಸ್ ಕೆಲಸದಲ್ಲಿದ್ದಾರೆ.
ಕೃಷ್ಣ: ಅವರು ಬಲಶಾಲಿಗಳೇ?
ರಾಮು: **ಹೌದಪ್ಪಾ, ಒಂದೇ ಕೈಯಿಂದ ಅವರು ಮೋಟಾರು ನಿಲ್ಲಿಸುತ್ತಾರೆ.**

o o o o

**ಎಡ್ವಾನ್ಸ್ ಲಂಚ.**

ಕ್ಷೌರಿಕ: ಏನು ಸ್ವಾಮಿ, ಎಲ್ಲರೂ ಕ್ಷೌರವಾದ ಬಳಿಕ ಹಣಕೊಡುವುದು. ನೀವು ಮೊದಲೇ ಕೊಟ್ಟಿರಲ್ಲಾ?
ರಾಯರು: ಈಗ ಕೊಟ್ಟ ಹಣ ಮಾತಾಡದೆ ಸುಮ್ಮಿರೋದಕ್ಕಾಗಿ ಲಂಚ!

---

# ನಕ್ಕು ವಿಚಾರಿಸುವಿರೋ? ವಿಚಾರಿಸಿ ನಗುವಿರೋ?

[ವಿಚಾರ 'ಕೆಮರಾ'ದಿಂದ ಹಿಡಿದ 'ಸ್ನೇಪ್‌ಶಾಟ್ಸ್' ದೃಶ್ಯಾವಳಿ.]

## ದೃಶ್ಯ ೧

[ಶಂಕರ ದೇವಸ್ಥಾನದ ಈಶ್ವರ ಭಟ್ಟರು ಥಳಥಳಿಸುವ ಜಗಲಿಯಲ್ಲಿ ಗಾಳಿ ಬೀಸುವೆಡೆ ಹಾಯಾಗಿ ಹೊರಳಾಡುತ್ತಾ ಬ್ರಾಹ್ಮಣಾರ್ಥದ ಊಟ ಕರಗಿಸುತ್ತಿದ್ದಾರೆ. ಅವರ ಮಗ ವಿಶ್ವನಾಥನು ಬಂದು ಚಾವಡಿಯಲ್ಲಿ ಮಲಗಿದ.]

ಈಶ್ವರ— ಏನಿದು ವಿಶ್ವಾ? ದೊಡ್ಡ ಪರೀಕ್ಷೆ ಹತ್ತಿರ ಬಂತು! ನೀನು ಓದೋದು ಬಿಟ್ಟು ಉಂಡಾಡಿಗಳ ಹಾಗೆ ಹೊರಳಾಡಲಿಕ್ಕೆ ತೊಡಗಿದೆಯಲ್ಲ?

ವಿಶ್ವ— ಓದದೇ ಪ್ಯಾಸ್ ಆಗುವ ಪ್ಲೇನ್ ಹಾಕಿದ್ದೇನೆ.

ಈಶ್ವರ—ಅಯ್ಯೋ, ಬೆಪ್ಪು ಮುಂಡೇದೇ! ಓದದೆ ಪ್ಯಾಸ್ ಹ್ಯಾಗೆ ಆಗುತ್ತೋ? ನೀನೇನು ಬರೆದಿಯಾ! ಅವರೇನು ನಂಬರು ಕೊಟ್ಟಾರು! ನಿನಗಂಥಾ ಹುಚ್ಚು ಪ್ಲೇನು ಹೇಳಿ ಕೊಟ್ಟವರು ಯಾರೋ?

ವಿಶ್ವ—ನೀನೇ.

ಈಶ್ವರ— ನಾನು! ನಾನು? ನಿನ್ನ ತಲೆ ಕೆಟ್ಟಿರಬೇಕು!

ವಿಶ್ವ—ಇಲ್ಲಪ್ಪ, ಮೊನ್ನೆ ಆ ಗುತ್ತಿನ ಶೆಟ್ರು ಬಂದಿದ್ರಲ್ಲ? ಖೂನಿ ಮೊಕದ್ದಮೆಯಲ್ಲಿ ಸಿಕ್ಕಿ ಬಿದ್ದವರು! 'ಪಿಂಜರೆಯಲ್ಲಿ ನಿಂತಾಗ ಏನು ಸವಾಲು ಬರುತ್ತೊ! ಪೂರ್ವಾಪರ ವಿಚಾರ ತಿಳಿಯದೆ ನನ್ನ ಬಾಯಿಂದ ಏನು ಹೊರಳಿ ಬಿಡುತ್ತೋ? ಜಡ್ಜರ ತಲೇಲಿ ಏನು ಹೊಳೆಯುತ್ತೋ!' ಅಂತ ಅವರು ಮೊರೆಯಿಟ್ಟಾಗ 'ಏನೂ ಗಾಬರಿಯಾಗಬೇಡಿ ಶೆಟ್ರೇ ನೀವು. ನಮ್ಮ ಶಂಕರ ಇದ್ದಾನೆ! ಅವನಿಗೆ ರುದ್ರಾಭಿಷೇಕ, ಹಾಲು ಪಾಯಸ, ತುಪ್ಪದ ಅಪ್ಪ, ಇಷ್ಟು ಮಾಡಿಸಿ ಪಿಂಜರೆ ಹತ್ತಿ. ಅವನೇ ಉತ್ತರಿಸುತ್ತಾನೆ ನಿಮ್ಮ ಬಾಯಿಂದ! ಜಡ್ಜರ ಲೇಖನೀನ್ನ ನಿಮ್ಮ ಗುಣಕ್ಕೆ ತಿರುಗಿಸಿ ಬಿಡ್ತಾನೆ!' ಅಂದ್ರಿಯಲ್ಲ?

ಈಶ್ವರ— ಹೌದು. ಅದಕ್ಕೂ ನೀನು ಓದು ಬಿಟ್ಟಿದ್ದಕ್ಕೂ ಏನು ಸಂಬಂಧಂತೇನೆ.

ವಿಶ್ವ—ನಾನೂ ಅದೇ ಹರಿಕೆ ಹೊತ್ತಿದ್ದೇನೆ. ಪರೀಕ್ಷೆ ದಿನ ಪ್ರಶ್ನೆಗೆ ತಕ್ಕ ಉತ್ತರ ಶಂಕರನೇ ನನ್ನ ತಲೇಲಿ ಮಿಂಚಿಸ್ತಾನೆ! ನಂಬರ್ ಕೊಡೋವ್ರ ಲೇಖನಿಯಿಂದ ದೊಡ್ಡದೊಡ್ಡ ನಂಬರು ಹಾಕಿಸ್ತಾನೆ! ಶೆಟ್ರಂತೆ ನಾವೇನೂ ದುಡ್ಡು ಕರ್ಚು ಮಾಡಬೇಕಾಗಿಲ್ಲ. ನೀನು, ಚಿಕ್ಕ ಅಣ್ಣ, ಬಾವ, ಮಾವ, ಇದ್ದೀರಿ. ಮಂತ್ರ ಬಾಯಿಯೊ ಉಂಟು. ನೀರು ಬಾವೀ ಉಂಟು! ಎಷ್ಟು ಸುಲಭ ಉಪಾಯ ಪರೀಕ್ಷೇಲಿ ಮೇಲೆ ಬೀಳೋಕೆ!

ಈಶ್ವರ— ಮೇಲ್ಬೀಳೋಕಲ್ಲಾ! ಪಾತಾಳಕ್ಕಿಳಿಯೋಕೇ ಅನ್ನು! ಹೌದೇನಾ, ಆ ಲಿಂಗದ ಮ್ಯಾಲೆ ನೀರೆರದರೆ ಕುಂಡಿಕೆ ತುಂಬೀತಲ್ಲದೆ ನಿನ್ನ ತಲೇಲಿ ಜ್ಞಾನ ತುಂಬೀತೇನೋ? ಯೋಚನೆ ಹೋದೀತೇನೋ? ಏ ಬೆಪ್ಪು ರಂಡೇದೇ! ಈ ಅಸಂಬದ್ಧ ಭ್ರಮೆಗೆಲ್ಲಾ ಮರುಳಾಗಿ ಓದು ಬಿಟ್ಟು ಕೂತುಕೊಂಡು ಪರೀಕ್ಷೆಗೆ ಕಟ್ಟಿದ ನನ್ನ ಕಷ್ಟದ ದುಡ್ಡನ್ನ ದಂಡಾ ಹಾಕಿಸಬೇಡಾಂದೆ. ಕೇಳಿತಾ? ಓದು, ಚೆನ್ನಾಗಿ ಓದು, ಉರು ಹಾಕು, ಗಟ್ಟಿಮಾಡು! ಚೆನ್ನಾಗಿ ತಲೆ ಪುಡಿಮಾಡ್ಕೊಂಡು ಕಲಿತ್ರೇನೇ ಪ್ಯಾಸ್. ಗುಂಡದ ದೇವರಿಗೆ ಹರಿಕೆ ಹೊತ್ತು ಸುಮ್ಮಗೆ ಕೂತ್ರೆ ಬೀಳೋದು ಹೊಂಡಕ್ಕೇ. ಚೆನ್ನಾಗಿ ತಲಿಯೊಳಗೆ ತಕ್ಕೋ ಇದನ್ನ.

ವಿಶ್ವ — ಹಾಗಾದರೆ... ಹಾಗಾದರೆ... ನೀನು...

ಈಶ್ವರ—ಹಾಗಾದರೆ ಹೀಗಾದರೆ ಅದೆಲ್ಲಾ ವಿಚಾರ ನಿನಗೆ ಬೇಡಾಂದೆ. ನಡೀ, ನಡೀ, ಪುಸ್ತಕ ಹಿಡೀ.

—'ವಿಚಾರಪ್ರಿಯ'

(ಸಶೇಷ.)



# ನಿಮಗೆ ಬೇಸರವಾದಾಗ ನನಗೆ ಬರೆಯಿರಿ.

ಪ್ರಶ್ನೆಗಳನ್ನು ಕೇಳುವವರು ತಮ್ಮ ಸಂಪೂರ್ಣ ವಿಳಾಸವನ್ನು ಕೊಡಬೇಕು. ಪೂರ್ಣ ವಿಳಾಸಗಳನ್ನು ಕೊಡದವರ ಪ್ರಶ್ನೆಗಳು ಉತ್ತರಿಸಲ್ಪಡಲಾರವು. ಪ್ರಶ್ನೆಗಳು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಡಬೇಕು. ಅಯೋಗ್ಯವೆಂದು ಕಂಡುಬಂದ ಪ್ರಶ್ನೆಗಳಿಗೆ ಉತ್ತರಕೊಡಲಾಗುವುದಿಲ್ಲ. ತಮ್ಮ ಪ್ರಶ್ನೆಗಳು ಹಿಂದೆಕಳುಹಿಸಲ್ಪಡಬೇಕೆಂದು ಬಯಸುವವರು ಅದಕ್ಕಾಗುವ ಅಂಚೆಚೀಟನ್ನು ಕಳುಹಿಸಿಕೊಡಬೇಕು.

**ಶ್ರೀ. ಆರ್. ವಿ. ಪೋಕಳೆ, ಕುಮಟಾ.**

**“ಅವಿವಾಹಿತ ಹುಡುಗಿಯರಿಗೆ ‘ಕುಮಾರಿ’ಯೆಂತ ಕರೆಯುತ್ತಾರೆ. ಆದರೆ ಆ ವಿವಾಹಿತ ಹುಡುಗಿಯರಿಗೆ ಮಕ್ಕಳಾದರೆ ಏನೆಂದು ಕರೆಯಬೇಕು?”**

ಅವಿವಾಹಿತ ಹುಡುಗಿಯರಿಗೆ ಸಂಬಂಧಪಟ್ಟ ಒಂದು ಸಮಸ್ಯೆಯನ್ನು ಬಿಡಿಸಲು ನೀವು ಮುಂದೆ ಬಂದಿರುವುದನ್ನು ಕಂಡು ಯಾರಾದರೂ ಮೆಚ್ಚದಿರಲಾರರೆಂದು ನನ್ನೂಹೆ. ‘ಕುಮಾರಿ’ಯರಿಗೆ ಮಕ್ಕಳಾಗುವುದೆಂಬ ರಹಸ್ಯವು ನಿಮಗೆ ತಿಳಿದಿರುವುದು ಸಂತೋಷದ ಸಂಗತಿ. ಈ ವಿಷಯವು ನಿಮ್ಮ ಸ್ವಂತ ಅನುಭವವೋ ಎಂಬ ಸಂಶಯವು ಅದೇಕೋ ನನ್ನಲ್ಲುತ್ಪನ್ನವಾಗುತ್ತಿದೆ. ಸ್ವಂತ ಅನುಭವವಾಗಿದ್ದರೆ ನಿಮಗೆ ಬೇಸರವಾಗಿ ಆ ಕುಮಾರಿಯನ್ನು ಹೇಗೆ ಕರೆಯಬೇಕೆಂದು ನೀವು ಕೇಳಿರುವುದರಲ್ಲಿ ಯಾವ ತಪ್ಪೂ ಇಲ್ಲ. ನಿಮ್ಮ ಪ್ರಶ್ನೆಯಂತೂ ಎರಡು ಉತ್ತರಗಳನ್ನು ನನ್ನಿಂದ ಪಡೆಯಲಿಚ್ಛಿಸುತ್ತಿವೆ. ಕಾರಣ—‘ಅವಿವಾಹಿತ’ ಹುಡುಗಿಯರಿಗೆ ಮಕ್ಕಳಾದರೆ ಅವರಿಗೇನೆಂದು ಕರೆಯಬೇಕು?—ಇದರಿಂದ ನೀವು ಕುಮಾರಿಯರ ಇನ್ನೊಂದು ಹೆಸರನ್ನು ತಿಳಿಯ ಬಯಸುತ್ತೀರೋ ಅಥವಾ ಮಕ್ಕಳ ಹೆಸರನ್ನು ಅರಿಯಲಾಶಿಸುತ್ತೀರೋ ಎಂಬುದು ನನಗರಿತಿಲ್ಲ. ಅಲ್ಲದೆ “ಮಕ್ಕಳಾದರೆ” ಎಂದು ನೀವು ಹೇಳಿರುವುದರಿಂದ ಈಗಲೇ ಆಗಲಿಲ್ಲ, ಪ್ರಾಯಶಃ ಆಗುವುದರಲ್ಲಿದೆಯೆಂದು ಭಾವಿಸಬೇಕಾಗುತ್ತದೆ. ಹೇಗಿದ್ದರೂ ಕುಮಾರಿಯನ್ನೂ ಮಗುವನ್ನೂ ಕರೆಯುವ ಆವಶ್ಯಕತೆಯು ನಿಮಗಿದೆಯೆಂಬುದರಿಂದ ನಾನು ಇಬ್ಬರನ್ನು ಹೇಗೆ ಕರೆಯುವುದೆಂದು ಹೇಳಲೇ ಬೇಕಾಗಿದೆ. ಇರಲಪ್ಪಾ, ಮಗು ಹುಟ್ಟಿದ ಕುಮಾರಿಯನ್ನು ನೀವು ‘ಪ್ರಿಯೆ’ ‘ಚಿನ್ನಾ’, ‘ನನ್ನತ್ತೆಯ ಮಗಳೆ’ ‘ಮುತ್ತಿನ ಚೆಂಡೆ’ ‘ಮೋಹದರಗಿಣಿ’ ‘ನಲ್ಲೆ’ ‘ಚಿನ್ನಾರ ಚೆಲುವೆ’ ಎಂದು ಮೊದಲಾಗಿ ಕರೆಯಬಹುದು. ಮಗುವನ್ನು ‘ಕಂದಾ’, ‘ಬೇಬಿ’ ಇತ್ಯಾದಿ ಹೆಸರುಗಳಿಂದ ಕರೆಯಬಹುದು.

**ಶ್ರೀ. ಶ್ರೀನಿವಾಸರಾವ್, ಬೆಂಗಳೂರು.**

“ಕುಮಾರಿ ಶಾಂತಾ ಆಪ್ಟೆಯವರು ಬೆಂಗಳೂರಿನಲ್ಲಿ ಭಾಷಣವೀಯುತ್ತಾ ಬೊಂಬಾಯಿನ ಫಿಲ್ಮ್ ಇಂಡಿಯಾ ಕಚೇರಿಯಲ್ಲಿ ನಡೆದ ಘಟನೆಯ ಬಗ್ಗೆ ವಿವರಗಳನ್ನು ತಿಳಿಯಲು ನೀವು ಕುತೂಹಲರಾಗಿರಬಹುದು. ನಾನೇನೂ ನನ್ನ ಪರವಾದಿಸುವವಳಲ್ಲ; ಭಾರತದ ಸ್ತ್ರೀತ್ವದ ಮತ್ತು ಭಾರತ ಮಹಿಳೆಯರ ಶೀಲದ ರಕ್ಷಣಾ ದೃಷ್ಟಿಯಿಂದ ನಾನು ಹಾಗೆ ಮಾಡಿದೆನೆಂದು ಹೇಳಿದರೆ ಸಾಕು. ಇಂತಹ ಕೊಚ್ಚೆಯ ವೃತ್ತ ಪತ್ರಿಕೋದ್ಯಮವು ಚಲಚ್ಚಿತ್ರ ಕಲಾನುಯಾಯಿಗಳಾದ ಹಲವು ನನ್ನ ಸೋದರಿಯರ ಪುರೋಭಿವೃದ್ಧಿಗೆ ಅಡ್ಡ ಬಂದಿದೆ. ಸಾರ್ವಜನಿಕರು ‘ಇಂತಹ ಪತ್ರಿಕೋದ್ಯಮಕ್ಕೆ ಬೆಂಬಲ ಕೊಡಬಾರದು’ ಎಂದು ಹೇಳಿದ್ದಾರೆ. ಈ ಸುಪ್ರಸಿದ್ಧ ಕಲಾಕೋವಿದೆಯರಾಡಿದ ಮಾತುಗಳು ನಿಮಗೆ ನಿಜವೆನಿಸುವುದಿಲ್ಲವೆ? ನಮ್ಮ ಕನ್ನಡ ಪತ್ರಿಕೆಗಳಲ್ಲಿ ಕೂಡಾ ಸ್ತ್ರೀತ್ವದ ಹೆಸರಿನಲ್ಲಿ ಬೇಕಷ್ಟು ಶೋಷಣೆಯು ನಡೆಯುತ್ತಿರುವುದೂ, ಅವರ ಸೌಂದರ್ಯವನ್ನು ಅತಿಯಾಗಿ ಉಪ

ಯೋಗಿಸುತ್ತಿರುವುದೂ ನಿಮಗೆ ಹಿತವೆನಿಸುತ್ತದೆಯೆ?''

ಕುಮಾರಿ ಶಾಂತಾ ಆಪ್ಟೆಯವರು ಮುಂಬಯಿಯ ಪ್ರಸಿದ್ಧ ಚಲನ ಚಿತ್ರ ಮಾಸಪತ್ರಿಕೆಯಾದ ಫಿಲ್ಮ್ ಇಂಡಿಯದ ಸಂಪಾದಕ ಬಾಬೂರಾವ್ ಪಟೇಲರಿಗೆ ಎರಡು ಏರಿಸಿ, ಭಾರತದ ಸ್ತ್ರೀತ್ವ ಮತ್ತು ಶೀಲವನ್ನು ರಕ್ಷಿಸಿಕೊಂಡಿರುವುದು ಇತರರಿಗೆ ಸಂತೋಷದ ವಿಚಾರವಾದರೂ ಪಟೇಲರಪಾಲಿಗೆಖಂಡಿತವಾಗಿಯೂ ಬೇಸರದ ಸಂಗತಿಯಾಗಿರ ಬಹುದು. ಆ ವಾರ್ತೆಯನ್ನೋದಿದೊಡನೆ ನನಗೆ ''ಅಮರ ಜ್ಯೋತಿ"ಯಲ್ಲಿ ದುರ್ಗಾ ಖೋಟೆಯ ಪಾತ್ರ ಚಂದ್ರ ಮೋಹನನ ಪಾತ್ರಕ್ಕೆ ಹೊಡೆಯುತ್ತಿರುವ ನೆನಪಾಯಿತು. ಕುಮಾರಿ ಆಪ್ಟೆಯವರು ಕೊಚ್ಚೆಯ ವೃತ್ತ ಪತ್ರಿಕೋದ್ಯಮಕ್ಕೆ ಬೆಂಬಲ ಕೊಡಬಾರದೆಂದು ಬಿನ್ನವಿಸಿಕೊಂಡಿದ್ದರೂ ಬಾಬುರಾವ್ ಪಟೇಲರಂಥವರು ಶಾಂತಾ ಆಪ್ಟೆಯವರಂತಹ ಸ್ತ್ರೀಯರಿಂದ ಪೆಟ್ಟು ತಿಂದಾದರೂ ಆ ರೀತಿ ಪತ್ರಿಕೆಗಳನ್ನು ನಡೆಸುತ್ತಿರುವುದನ್ನು ನೋಡುವಾಗ ಮಹಾಜನರು ಅಂಥವುಗಳನ್ನು ಮೆಚ್ಚುತ್ತಾರೆಂದೇ ಕಾಣುತ್ತದೆ. ಜಗತ್ತು ಸದಾ ಸೌಂದರ್ಯ, ಸುಖ ಶಾಂತಿಗಳಿಗಾಗಿ ಹಾತೊರೆಯುತ್ತಿರುವುದರಿಂದ ವ್ಯಾಪಾರ ದೃಷ್ಟಿಯಲ್ಲಿ ಯಶಸ್ಸನ್ನು ಹೊಂದುವುದಕ್ಕಾಗಿ ಆ ಸೌಂದರ್ಯದ ಕಿಡಿಗಳನ್ನು ಒಮ್ಮೊಮ್ಮೆ ತಮ್ಮ ಪತ್ರಿಕೆಗಳಲ್ಲಿ ತುಂಬಿ, ಹಾತೆಗಳನ್ನು (ವಾಚಕರನ್ನು) ಆಕರ್ಷಿಸುತ್ತಿರುವುದು ಸ್ವಾಭಾವಿಕವಾಗಿದೆ. 'ಸೌಂದರ್ಯವು ಚಲಾವಣೆಯಾಗಬೇಕಾದ ನಾಣ್ಯ'ವೆಂದು ಮಿಲ್ಟನ್ ಕವಿಯು ಹೇಳಿದ್ದಾನೆ. ಪ್ರಾಯಶಃ ಈ ಕೊಚ್ಚೆಯ ವೃತ್ತ ಪತ್ರಿಕೋದ್ಯಮಿಗಳು ಈ ರೀತಿಯಲ್ಲಿ ಸೌಂದರ್ಯವೆಂಬ ನಾಣ್ಯಗಳ ಪುಡಿಕಾಸುಗಳನ್ನು ಕಿಡಿಗಳ ರೂಪದಲ್ಲಿ ಚಲಾವಣೆ ಮಾಡುತ್ತಿರಬಹುದು. ಪ್ರಯೋಜನವಿಲ್ಲದೆ ಯಾರೂ ಹೀಗೆ ಮಾಡಲಿಕ್ಕಿಲ್ಲವೆನ್ನಿ. ಈ 'ದುರ್ಬುದ್ಧಿ'ಯು ಕನ್ನಡ ಪತ್ರಿಕೆಗಳಿಗೆ ಹೆಚ್ಚುತ್ತಿದೆಯೆಂಬುದು ಸತ್ಯವಾದರೂ, ಅದನ್ನು ಮೆಚ್ಚುವ 'ದುರ್ಬುದ್ಧಿ"ಯ ಓದುಗರಲ್ಲಿ ಹೆಚ್ಚುತ್ತಿರುವುದರಿಂದ ಅವರ ಮೆಚ್ಚುಗೆಗೆ ಬೇಕಾದುದನ್ನು ಕೊಡದಿದ್ದರೆ ಪತ್ರಿಕೆಗಳ •ಪುರೋಭಿವೃದ್ಧಿಗೆ ದೊಡ್ಡ ಅಡ್ಡಿಯಾಗುವುದೆಂದು ತಿಳಿದೇ ಕನ್ನಡ ಪತ್ರಿಕೆಗಳು ಕೂಡಾ ಫಿಲ್ಮ್ ಇಂಡಿಯದ ಸಂಪಾದಕರು ನಡೆದ ದಾರಿಯಲ್ಲೇ ಮುನ್ನಡೆಯುತ್ತಿರಬಹುದು. ಚಲಚ್ಚಿತ್ರಗಳಲ್ಲಿ ಸೌಂದರ್ಯವನ್ನು ಪ್ರದರ್ಶಿಸುವ ವಿವಿಧ ಕ್ರಮಗಳು ನಿಲ್ಲುವಂತಾದರೆ ಪ್ರಾಯಶಃ ಪತ್ರಿಕೋದ್ಯಮಿಗಳು ಕೂಡಾ 'ಕೊಚ್ಚೆ' ವಿಧಾನವನ್ನು ನಿಲ್ಲಿಸಿಬಿಡಲೂ ಬಹುದು. ಒಟ್ಟಿನ ಮೇಲನ್ನುವುದಿದ್ದರೆ ಕುಮಾರಿ ಆಪ್ಟೆಯವರೂ, ಬಾಬೂರಾವ್ ಪಟೇಲರೂ ಫಿಲ್ಮ್ ಇಂಡಿಯಾ ಕಛೇರಿಯಲ್ಲಿ ''ಸುಧಾರಿಸಿಕೊಂಡಂತೆ" ಸಾರ್ವಜನಿಕರೂ, 'ಕೊಚ್ಚೆ ಪತ್ರಿಕೋದ್ಯಮಿ'ಗಳೂ, ಚಲನಚಿತ್ರ ನಟಿಯರೂ ಸಹನೆಯಿಂದ ಸುಧಾರಿಸಿಕೊಳ್ಳುವ ಒಂದು ಏರ್ಪಾಡನ್ನು ಸಾವಕಾಶವಾಗಿ ಮಾಡಿಕೊಳ್ಳದಿದ್ದರೆ ಗತ್ಯಂತರವೇ ಇಲ್ಲ. ಕುಮಾರಿ ಆಪ್ಟೆಯವರನ್ನು ಅವರ ಈಗಿನ ಮಟ್ಟಿಗೆ ಏರಿಸಿರುವ ಕೊಚ್ಚೆ ಪತ್ರಿಕೋದ್ಯಮಿಗಳ ಹಂಗು ಅವರಿಗೆ ಇನ್ನು ಇಲ್ಲದಿರಬಹುದು. ಶಾಂತಾಆಪ್ಟೆಯವರನ್ನು ಪಟೇಲರು ತನ್ನ ಕೊಚ್ಚೆ ವಿಧಾನಗಳಿಂದ ಹೇಗೆ ಕೀರ್ತಿಯತುತ್ತತುದಿಗೆ ಕೊಂಡೊಯ್ದರೋ ಹಾಗೆಯೇ ಕುಮಾರಿಯವರು ಕೂಡಾ ತನ್ನ ಕೊಚ್ಚೆ ವಿಧಾನಗಳಿಂದ ಪಟೇಲರಿಗೆ ಪ್ರತ್ಯುಪಕಾರ ಮಾಡುತ್ತಿದ್ದಾರೆ.

○ ○ ○

ವ.ಚಂದ್ರಶೇಖರ. ರಾಜರಾಜೇಶ್ವರಿ ಮಿಲ್ಲು, ವಂಟಿಕೊಪ್ಪಲ, ಮೈಸೂರ.

---

ನೀವು ಪ್ರಶ್ನೆಗೆ ಉತ್ತರಕೊಡುವುದರಲ್ಲಿ ಬಹಳ ಚತುರರೆಂದೂ, ಆದ್ದರಿಂದ ನೀವು ಏತಕ್ಕೆ ಸರಕಾರದಲ್ಲಿ ಮೇಲುತರಗತಿಯ ನ್ಯಾಯಾಧೀಶರಾಗಬಾರದೆಂದೂ ನನ್ನ ಸ್ನೇಹಿತರೊಬ್ಬರು ನನಗೆ ಪ್ರಶ್ನಿಸುತ್ತಾರೆ. ಅದಕ್ಕೇನು ಹೇಳುವಿರಿ?

ನಾನು ಪ್ರಶ್ನೆಗಳಿಗೆ ಉತ್ತರ ಕೊಡುವುದರಲ್ಲಿ ಚತುರನೆಂದು ನಿಮ್ಮ ಗಮನಕ್ಕೂ ನಿಮ್ಮ ಸ್ನೇಹಿತರ ಗಮನಕ್ಕೂ ಬಂದಂತೆ ಸರಕಾರದ ಗಮನಕ್ಕೆ ಬಾರದಿರುವುದರಿಂದಲೇ ನೀವು ಹೇಳುವ ಆ ಉತ್ತಮ ತರಗತಿಯ ನ್ಯಾಯಾಧೀಶರ ಪದವಿಯು ನನಗೆ ಈ ವರೆಗೆ ದೊರೆತಿಲ್ಲ. ಒಂದೊಮ್ಮೆಗೆ ನಿಮ್ಮೆಲ್ಲರ ಪ್ರಯತ್ನದಿಂದ ಅದು ಸರಕಾರದ ಗಮನಕ್ಕೆ ಬಂದು, ನನಗೆ ಆ ಹುದ್ದೆ ದೊರೆತರೆ ಪ್ರಶ್ನೆ ಕೇಳುವದರಲ್ಲಿ ಇಷ್ಟೊಂದು ಚಾತ

ರ್ಯವನ್ನು ಪ್ರದರ್ಶಿಸಿದ ನಿಮಗೆ ಸರಕಾರೀ ವಕಾಲತು ಸಿಕ್ಕುವಂತೆ ನಾನು ಪ್ರಯತ್ನಿಸುತ್ತೇನಾಗಿ ಭರವಸೆಕೊಡುತ್ತೇನೆ.

ooo

"ಕನ್ನಡ ಪತ್ರಿಕೆಗಳಲ್ಲಿ ಇಂಗ್ಲೀಷ್ ಎಡ್ವರ್ಟೈಸು (*Advertise*) ಏತಕ್ಕೆ ಪ್ರಕಟಿಸುತ್ತೀರಿ? ಕನ್ನಡದ ಮೇಲೆ ಹೆಚ್ಚಾಗಿ ಅಭಿಲಾಷೆ ಇರುವವರೇ ಕನ್ನಡ ಪತ್ರಿಕೆಗಳನ್ನು ಕೊಂಡು ಓದುತ್ತಾರೆ. ಅದಲ್ಲದೆ ಎಷ್ಟೋ ಜನ ಕನ್ನಡಿಗರಿಗೆ ಇಂಗ್ಲಿಷ್ ಭಾಷೆಯು ಬರುವುದೇ ಇಲ್ಲ. ಈ ರೀತಿ ಎಡ್ವರ್ಟೈಸನ್ನು ಮತ್ತು ಇತರ ವಿಷಯಗಳನ್ನು ಇಂಗ್ಲೀಷಿನಲ್ಲಿ ಕೊಡುವುದರಿಂದ ಎಡ್ವರ್ಟೈಸು ಕೊಡುವ ಬ್ಯಾಂಕು, ಇನ್ಶ್ಯುರೆನ್ಸು, ಔಷಧಿ ಷಾಪು, ಮತ್ತು ಇತರ ಕಂಪೆನಿ ಇವುಗಳೆಲ್ಲಕ್ಕೂ ಏನು ಪ್ರಯೋಜನ? "ಕನ್ನಡ ಪತ್ರಿಕೆಗಳಲ್ಲಿರುವ ಇಂಗ್ಲಿಷು ಎಡ್ವರ್ಟೈಸುಗಳನ್ನು ಓದುವುದಕ್ಕೆ ಬರದೇ ಇದ್ದವರಲ್ಲಿ ನಾನೊಬ್ಬನಾಗಿದ್ದೇನೆ. ಆದ್ದರಿಂದ ದಯವಿಟ್ಟು ಇವೆಲ್ಲಕ್ಕೂ ಉತ್ತರ ತಿಳಿಸುವಿರಾ?

ಜಾಹಿರಾತುಕೊಡುವ ಸಂಸ್ಥೆಗಳು ಇಂಗ್ಲಿಷಿನಲ್ಲಿ 'ಎಡ್ವರ್ಟೈಸ್' ಕೊಡುವದರಿಂದಾಗುವ ಪ್ರಯೋಜನವನ್ನು ಮನಗಾಣದೆ ಹಾಗೆ ಮಾಡಲಾರವು. ನಿಮ್ಮ ಮಟ್ಟಿಗೆ ಹೇಳುವುದಾದದರೆ ನೀವು ಇಂಗ್ಲಿಷು ಕಲಿಯದಿದ್ದುದರಿಂದ ಈಗ ಆ 'ಎಡ್ವರ್ಟೈಸ್'ಗಳನ್ನು ಓದಲಿಕ್ಕೂ ತೊಂದರೆ- ಮುಂದಕ್ಕೆ ನಾನು ಮೇಲ್ಗಡೆಯಲ್ಲಿ ಶಿಫಾರಸು ಮಾಡಿದ ಸರಕಾರೀ ವಕೀಲೀವೃತ್ತಿಗೂ ತೊಂದರೆ! ಆದ್ದರಿಂದ ನೀವು ಇಂಗ್ಲಿಷ್ ಕಲಿಯಬೇಕಾದುದೇ ಅಗತ್ಯ.

ooo

ಶ್ರೀ. ಕೆ. ಯನ್. ಸಿಂಗ್, ಸ್ಟಾಫ್ ಕ್ವಾರ್ಟರ್ಸ್, ಭದ್ರಾವತಿ.

---

ಸುಡೆಟನ್ ಪ್ರಾಂತ್ಯವನ್ನು ಜರ್ಮನಿಗೆ ಸೇರಿಸಿಕೊಳ್ಳುವುದೇ ತಮ್ಮ ಕೊನೆಯಾಶೆಯೆಂದು ಹೇಳಿ ಇನ್ನೂ ೨೦ ದಿನಗಳಾಗಿಲ್ಲ. ಹೆರ್, ಹಿಟ್ಲರ್‌ರವರು ಈಗಾಗಲೇ ಕೊಲೋನಿಗಳಿಗಾಗಿ ತಗಾದೆ ಹಚ್ಚಿದ್ದಾರಲ್ಲ. ಇದರ ಅರ್ಥವೇನು? ಇವರ ಕೊನೆಯಾಶೆ ಯಾವುದೋ?

ಹೆರ್ ಹಿಟ್ಲರನ ಕೊನೆಯಾಶೆ ಯಾವುದೆಂಬುದನ್ನು ತಿಳಿಯಬೇಕಾದರೆ ನೀವು "Mein Kempf" ಎಂಬ ಅವನ ಆತ್ಮಚರಿತ್ರೆಯನ್ನೋದಬೇಕು. ಏಜಿಯನ್ ಸಮುದ್ರದವರೆಗೆ ಒಮ್ಮೆಗೇ ಸಾಗುವುದಕ್ಕಾಗಿ ಅವನು ಆರ್ಥಿಕವ್ಯವಸ್ಥೆಯನ್ನು ಮಾಡುತ್ತಿದ್ದಾನೆ. ಇದಕ್ಕಾಗಿ ಜರ್ಮನ್ ಸರ್ವಾಧಿಕಾರಿಯು ಈಗಾಗಲೇ ಬಾಲ್ಕನ್ ರಾಷ್ಟ್ರಗಳೊಡನೆ ವ್ಯಾಪಾರ ವಹಿವಾಟನ್ನು ನಡೆಸಿ ಅವರನ್ನು ತನ್ನ ನಾಝಿ ಬಲೆಯಲ್ಲಿ ಸಿಲುಕಿಸಿದ್ದಾನೆ. ಡೇನ್ಯೂಬ್ ನದಿಯು ಯಾವ ದಿಕ್ಕಿಗೆ ಹರಿಯುತ್ತಿದೆಯೋ ಆ ದಿಕ್ಕಿನಲ್ಲಿ ಅವನ ಸಾಮ್ರಾಜ್ಯ ವಿಸ್ತಾರದ ಚಟುವಟಿಕೆಗಳೂ ನಡೆಯುತ್ತಿವೆ. ಸ್ವಲ್ಪ ಸಮಯದ ಹಿಂದೆ ಜೆಕೊಸ್ಲೊವೇಕಿಯವು ಅವನ ದಾರಿಯ ಮೇಲಿದ್ದ ಕಲ್ಲಿನ ರಾಶಿಯಾಗಿತ್ತು. ಆದರೆ ಈಗ ಅದರ ತೊಂದರೆಯು ಕಡಿಮೆಯಾದಂತಾಯಿತು. ಹಂಗೇರಿಯದಲ್ಲಿ ಡೇನ್ಯೂಬ್ ನದಿ ಹರಿಯುವುದರಿಂದ ಆ ರಾಷ್ಟ್ರವನ್ನು ಅವನು ತನ್ನ ಬಲೆಯೊಳಗೆ ಹಾಕಿಕೊಂಡಂತೆಯೇ ಸರಿ. ಬಲ್ಗೇರಿಯಾ ಮತ್ತು ಗ್ರೀಸ್ ದೇಶಗಳು ಈಗಾಗಲೇ ಹಿಟ್ಲರನಿಗೆ ನಾಝಿ ವಂದನೆಗಳನ್ನು ಕೊಡುತ್ತಿವೆ. ಯುಗೊಸ್ಲೋವಿಯಾ ಮತ್ತು ರುಮೇನಿಯಾಗಳು ರಷ್ಯದ ಬೆಂಬಲದಿಂದ ಅವನ ಪ್ರಗತಿಯನ್ನು ತಡೆಯುತ್ತಿವೆ. ಭೂಮಧ್ಯ ಸಮುದ್ರದಲ್ಲಿ ಇಟೆಲಿ ಮತ್ತು ಬ್ರಿಟನ್ ಏಕಪ್ರಕಾರವಾಗಿ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳುತ್ತಿವೆ. ಹಿಟ್ಲರ್ ಮತ್ತು ಮುಸ್ಸೋಲಿನಿಯರು ಒಂದಾಗಿ, ಒಂದೇ ಕಲ್ಲಿನಿಂದ ಪ್ರಜಾಸತ್ತಾತ್ಮಕವೆಂದು ಕರೆಯಲ್ಪಡುವ ಫ್ರಾನ್ಸ್ ಮತ್ತು ಬ್ರಿಟನಿನ ಎರಡು ಹಕ್ಕಿಗಳನ್ನು ಹೊಡೆದು ಕೆಡಹಲೆತ್ನಿಸುತ್ತಿದ್ದಾರೆ. ಸ್ಪೈನಿನ ಜನರಲ್ ಫ್ರೇಂಕೊನಿಗೆ ಬೆಂಬಲವೀಯುತ್ತಿರುವುದರಿಂದ ಫ್ರಾನ್ಸಿನ ಸೈನ್ಯದ ಪರಿಸ್ಥಿತಿಯು ಸ್ವಾಭಾವಿಕವಾಗಿ ಕೆಡುವುದಲ್ಲದೆ ಭೂಮಧ್ಯ ಸಮುದ್ರದ ಒಡೆತನವು ಮುಸ್ಸೋಲಿನಿಗಾಗುವುದು. ಭೂಮಧ್ಯ ಸಮುದ್ರವನ್ನು ಹಿಟ್ಲರ್ ಮುಸ್ಸೋಲಿನಿಯರು ಬ್ರಿಟಿಷರಿಗೆ ಉಪಯೋಗಿಸಲು ಬಿಡದಿದ್ದರೆ ಪೌರ್ವಾತ್ಯ ದೇಶಗಳಿಗೆ ಬ್ರಿಟನಿನ ಸೈನ್ಯವು ಬರುವುದು ಕಷ್ಟಸಾಧ್ಯವಾಗುವುದು. ಹೀಗಾದರೆ ಸ್ವಾಭಾವಿಕವಾಗಿ ಬ್ರಿಟಿಷರ ಶಕ್ತಿಯು ಕ್ಷೀಣವಾಗುವುದಲ್ಲದೆ ಹಿಟ್ಲರನು ನಿರಾತಂಕವಾಗಿ ಯುರೋಪನ್ನು ತನ್ನ ಬಗಲೊಳಗೆ ಹಾಕಬಹುದು. ವಸಾಹತುಗಳಿಗಾಗಿ ಹಿಟ್ಲರನ ತಗಾದೆ ಹೆಚ್ಚಿರುವ ಕಾರಣವೂ ಇದೆ.

ಬ್ರಿಟಿಷ್ ಮತ್ಸದ್ದಿಗಳನ್ನು ತನ್ನ ಚಾಣಾಕ್ಷತೆಯ ಬಲೆಯಲ್ಲಿ ಸಿಲುಕಿಸಿರುವ ರಹಸ್ಯವೂ ಇದೇ. ಅವನ ಕೊನೆಯಾಶೆಯೆಂದರೆ ಯುರೋಪನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವುದಾಗಿದೆ.

ooo

"ಕರಾಚಿಯಲ್ಲಿ ಮೊನ್ನೆ ಶ್ರೀ. ಮ.ಜಿನ್ನ ಮತ್ತು ಫಜಲುಲ್ ಹಕ್, ಇವರು ಮಾಡಿದ ಉದ್ರೇಕಪೂರಿತ ಭಾಷಣದ ತಾತ್ಪರ್ಯವೇನು?

'ಒಬ್ಬ ಹುಡುಗನ ಮುಂದಾಳುತನದಲ್ಲಿ ಹದಿನೆಂಟು ಜನ ಮಹಮ್ಮದೀಯರು ಇಡೀ ಸಿಂಧಪ್ರಾಂತ್ಯವನ್ನೇ ಗೆದ್ದರು. ನಾವು ಒಂಭತ್ತು ಕೋಟಿ ಮಹಮ್ಮದೀಯರು ಭಾರತವನ್ನು ಆಳಲಾರೆವೆ?' ಅಂದರೆ ಇವರು ಭಾರತದಲ್ಲಿ ಮುಸ್ಲಿಂ ರಾಜ್ಯಸ್ಥಾಪನೆ ಮಾಡಲು ಜನರನ್ನು ಉದ್ರೇಕಕ್ಕೊಳಗು ಮಾಡುತ್ತಿದ್ದಾರೆಂದು ಅರ್ಥವಾಗುವುದಿಲ್ಲವೇ? ಇಂಥ ಭಾಷಣಗಳು ಕಾನೂನಿನ ಹದ್ದು ಮೀರುವುದಿಲ್ಲವೆ? ಇವರ ಈ ಕೂಗಾಟಗಳೇ ಮೊನ್ನೆ ಢಿಲ್ಲಿ ಮತ್ತು ಮುಲ್ತಾನಿನಲ್ಲಿ ನಡೆದ ಗಲಭೆಗಳಿಗೆ ಕಾರಣವಾಗಿರಬಹುದೆ?"

ಜಿನ್ನಾ ಮತ್ತು ಕಂಪೆನಿಯವರ ಧುರೀಣತೆಯು ಇಂತಹ ಭಾಷಣಗಳ ಮೇಲೆಯೇ ಹೊಂದಿಕೊಂಡಿದೆ. ಜನತೆಗಾಗಿ ದುಡಿದು ಜನರಿಂದಲೇ ಧುರೀಣತ್ವದ ಛತ್ರ ಚಾಮರಗಳನ್ನು ಹೊಂದಲಿಚ್ಛಿಸುವುದಿದ್ದರೆ ಮಿ| ಜಿನ್ನರು ಈಗಿನಂತೆ ವರ್ತಿಸುತ್ತಿದ್ದಿಲ್ಲ. ಶುಷ್ಕವಾದ ವಿಚಾರಗಳಿಗಾಗಿ ತರ್ಕಿಸುತ್ತಿದ್ದಿಲ್ಲ. ಈ ತರದ ಕೂಗಾಟಗಳು ನಿಂತುಹೋದರೆ ಮಿ| ಜಿನ್ನರ ಧುರೀಣತೆಯು ಕೂಡಾ ಮೂಲೆ ಪಾಲಾಗುವುದರಿಂದ ಅವರು ಹಾಗೆ ಮಾಡದೆ ಗತ್ಯಂತರವಿಲ್ಲವೆಂದು ನಿಮಗನಿಸುವುದಿಲ್ಲವೆ?

ooo

"ನಾನಾ ರಾಷ್ಟ್ರಗಳ ಕೋಟಿಗಟ್ಟಲೆ ಐಶ್ವರ್ಯವನ್ನು ಸೂರೆಗೊಂಡ ಲೀಗ್ ಆಫ್ ನೇಶನ್ಸ್ ಮೊನ್ನೆ ಸೇರಿದ್ದಾಗ ಗ್ಯಾಲರಿಗಳೆಲ್ಲಾ ಖಾಲಿ ಬಿದ್ದು ಹಾಳು ಸುರಿಯುತ್ತಿತ್ತಂತೆ. ಮಂಚುಕೋ, ಅಬಿಸೀನಿಯಾ ಆಸ್ಟ್ರಿಯಾ, ಸ್ಪೈನ್, ಚೈನಾ, ಜೆಕೊಸ್ಲೊವೇಕಿಯಾ ಇವುಗಳು ಇಟಲಿ, ಜರ್ಮನ್, ಜಪಾನುಗಳ ದಬ್ಬಾಳಿಕೆಗೆ ಸಿಕ್ಕಿ ಹಾಳಾಗುತ್ತಿರುವಾಗ ಈಗಲಾದರೂ ಪುಂಸತ್ವವಿಲ್ಲದ ಈ ಗಾಳಿಗೋಪುರಕ್ಕೆ ಸಮಾಧಿ ಮಾಡಬಾರದೆ?"

ಜನಾಂಗಸಭೆಯೆಂಬ ಸಂಸ್ಥೆಯು ಎಂದೋ ಸಮಾಧಿ ಹೊಂದಿದೆ.

(೨೩ನೆ ಪುಟ ನೋಡಿರಿ.)



**ಪ್ರಥಮ ದರ್ಶನ ಸಮಾರಂಭ:** “ಸುಲ್ತಾನರ ಅರಮನೆಯಲ್ಲಿ ಹೊಸ ಪೋಷಾಕನ್ನು ಧರಿಸಿದ ಹನ್ನೆರಡು ಯುವಕರು ಸಾಲಾಗಿ ನಿಂತಿದ್ದರು. ಸಾಲಾಗಿ ನಿಂತಿರುವ ಭಾವೀ ಗಂಡಂದಿರೆದುರು ವಧುವು ಅರ್ಧ ಮುಸುಕು ಹಾಕಿಕೊಂಡು ಮೂರು ಮಂದಿ ಸ್ತ್ರೀಯರೊಡನೆ ನಿಂತಳು. ಇದು ವಧುವಿನ 'ಪ್ರಥಮ ದರ್ಶನ ಸಮಾರಂಭವೆಂದು ಸುಲ್ತಾನರು ನನಗೆ ಹೇಳಿದರು.”

# ಬೋರ್ನಿಯೋ ದ್ವೀಪದ ವಿಚಿತ್ರ ವಿವಾಹ ಪದ್ಧತಿ.

ಸೌಂದರ್ಯದಿಂದ ಮತ್ತರಾದ ತರುಣರ ಪ್ರಚಂಡ ಸ್ಪರ್ಧೆ!

## ಸ್ತ್ರೀಯರನ್ನು ಮೆಚ್ಚಿಸುವುದಕ್ಕಾಗಿ ಪುರುಷರ ಶಿರಚ್ಛೇದನ!

ತರುಣರನ್ನು ಉದ್ರೇಕಿಸುವುದಕ್ಕಾಗಿ ಅರೆ ನಗ್ನ ನೃತ್ಯ!

### ಕರ್ನಲ್ ಪವೆಲರ ಹೊಸ ಪುಸ್ತಕದಲ್ಲಿ ಡ್ಯಾಕ್ ಜನರ ಪ್ರೇಮ ಪ್ರಸಂಗದ ವಿವರ

●

ಪ್ರಸಿದ್ಧ ಲೋಕಸಂಚಾರಿಗಳಲ್ಲೊಬ್ಬರಾದ ಕರ್ನಲ್ ಪವೆಲ್ ಎಂಬವರು ಇತ್ತೀಚೆಗೆ ದೂರ ಪ್ರಾಚ್ಯ ದೇಶಗಳ ಕೆಲವು ದ್ವೀಪಗಳಲ್ಲಿ ಸಂಚರಿಸಿ, ಅಲ್ಲಿಯ ಜನಜೀವನದ ವೈಚಿತ್ರ್ಯ, ಕೇಳಿದರೆ ಆಶ್ಚರ್ಯವೆನಿಸುವ ಸಮಾಜದ ಪದ್ಧತಿಗಳು, ಅಲ್ಲಿಯ ಜನರ ವಿವಾಹಕ್ರಮ ಮತ್ತು ಪ್ರೇಮಪ್ರಸಂಗಗಳೇ ಮೊದಲಾದುವುಗಳನ್ನು ನಖಶಿಖಾಂತವಾಗಿ “Free Lance” ಎಂಬೊಂದು ಪುಸ್ತಕದಲ್ಲಿ ವಿವರಿಸಿ

ದ್ದಾರೆ. ಈ ಪುಸ್ತಕವನ್ನು ಲಂಡನಿನ ಹರ್ರಾಪ್ಸ್ ಕಂಪೆನಿಯವರು ಪ್ರಸಿದ್ಧಿಸಿದ್ದಾರೆ.

**ಸ್ತ್ರೀಯರನ್ನು ಮೆಚ್ಚಿಸುವುದಕ್ಕಾಗಿ ಪುರುಷರ ಶಿರಚ್ಛೇದನ!**

ಕರ್ನಲ್ ಪವೆಲ್‌ರವರು ಬೋರ್ನಿಯೋ ದ್ವೀಪದ ಡ್ಯಾಕರೆಂಬ ಜನರ ಕುರಿತು ಸ್ವಾರಸ್ಯದ ಕತೆಯನ್ನು ಹೇಳಿದ್ದಾರೆ:

"ನನಗೆ ಬೋರ್ನಿಯೋ ದ್ವೀಪದ ಕಾಡು ಜನರಾದ ಡ್ಯಾಕರ ವಿವಾಹ ಪದ್ಧತಿಯು ಹೇಗಿದೆಯೆಂಬುದನ್ನು ತಿಳಿಯುವ ಕುತೂಹಲವುಂಟಾಯಿತು. ಆಸ್ಟ್ರೇಲಿಯದಿಂದ ನಾನು ಸೀದಾ ಬೋರ್ನಿಯೋ ದ್ವೀಪಕ್ಕೆ ತೆರಳಿದೆ.

"ನಾನು ಡ್ಯಾಕ್ ಜನರು ವಾಸಿಸುವ ಕೋಟ್ಯಾಯೆಂಬ ಪ್ರಾಂತ್ಯಕ್ಕೆ ತೆರಳಿದೆ. ಅಲ್ಲಿಯ ಸುಲ್ತಾನರು ನನಗೆ ವಿಜೃಂಭಣೆಯ ಸತ್ಕಾರವಿತ್ತರು. ಸುಲ್ತಾನರು ಸ್ವತಃ ಒಬ್ಬ ರಸಿಕರು. ಕೋಟಾಯಿಯ ವಿವಿಧ ವೈಚಿತ್ರ್ಯಗಳನ್ನು ಕಾಣಬೇಕೆಂಬ ನನ್ನ ಇಚ್ಛೆಯನ್ನು ಅವರು ಸಂತೋಷದಿಂದ ಪೂರೈಸಿಕೊಟ್ಟರು. ಸ್ತ್ರೀಯರನ್ನು ಮೆಚ್ಚಿಸುವುದಕ್ಕಾಗಿ ದ್ವೀಪನಿವಾಸಿಗಳು ಹೇಗೆ ಇತರರ ಶಿರಚ್ಛೇದ ಮಾಡುವರೆಂಬುದನ್ನು ಕೇಳಿ ನನಗೆ ಅಚ್ಚರಿಯೆನಿಸಿತು.

**ಕೋಟ್ಯಾ ನದಿಯ ದಡದಲ್ಲಿ-**

"ಅಂದು ಕೋಟಾಯಿಯ ದ್ವೀಪನಿವಾಸಿಗಳ ಅಧಿಪತಿಯ ಮಗಳ ಮದುವೆಯ 'ಪರೀಕ್ಷಾದಿನ'ವಾಗಿತ್ತು. ಪ್ರಾಯಶಃ ಇಂತಹ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕೆಂದಿದ್ದರೆ ನಾವೆಂದಿಗೂ ಮದುವೆಯಾಗಬೇಕೆಂದು ಆಶಿಸಲಾರೆವೆಂದು ನನಗನ್ನಿಸಿತು. ಇಂಡಿಯದಲ್ಲಿ ಮೊದಲು "ಸ್ವಯಂವರ" ಅಥವಾ ಹುಡುಗಿಗೆ ಇಚ್ಛೆಯಿದ್ದವಳನ್ನು ವರಿಸುವ ಪದ್ಧತಿಗೂ ಈ ಪದ್ಧತಿಗೂ ನಿಕಟ ಸಂಬಂಧವಿರಬೇಕೆಂದು ನನಗದನ್ನು ಕಂಡು ಸ್ಪಷ್ಟವಾಯಿತು.

**ಒಬ್ಬ ತರುಣಿಗೆ ಹದಿನೆರಡು ಮಂದಿ ಗಂಡಂದಿರು-!**

ಕೋಟಾಯ್ ಸಂಸ್ಥಾನದ ಹದಿನೆರಡು ಯುವಕರು ಹೊಸ ಪೋಷಾಕನ್ನು ಧರಿಸಿ ಸುಲ್ತಾನರ ಅರಮನೆಯಲ್ಲಿ ಸಾಲಾಗಿ ನಿಂತಿದ್ದರು. ಯಾವ ದಳಪತಿಯ ಮಕ್ಕಳಾದರೂ ಅವರ ಮದುವೆಯು ರಾಜರ ಅರಮನೆಯಲ್ಲಿ ನಡೆಯಬೇಕೆಂದು ನಿಯಮವಿದೆ. ರಾಜರೆದುರು ಸಾಲಾಗಿ ನಿಂತಿರುವ ಹದಿನೆರಡು ಮಂದಿ ಭಾವೀ ಗಂಡಂದಿರೆದುರು ವಧುವು ಅರ್ಧಮುಸುಕು ಹಾಕಿಕೊಂಡು ಮೂರು ಮಂದಿ ಸ್ತ್ರೀಯರೊಡನೆ ನಿಂತಳು. ಇದು ವಧುವಿನ ಪ್ರಥಮ ದರ್ಶನ ಸಮಾರಂಭವೆಂದು ಸುಲ್ತಾನರು ನನಗೆ ಹೇಳಿದರು.

**ದ್ವೀಪನಿವಾಸಿಗಳ ಅರೆನಗ್ನ ನೃತ್ಯ.**

ಹದಿನೆರಡು ಮಂದಿ ವರರು ಈಜುವುದರಲ್ಲಿ ತಮ್ಮ ಸಾಮರ್ಥ್ಯವನ್ನು ತೋರಿಸಿ, ಎಲ್ಲರಿಗಿಂತಲೂ ಸಮರ್ಥನಾದವನನ್ನು ಮದುವೆಯಾಗುವ ಮೊದಲು ದ್ವೀಪನಿವಾಸಿಗಳ ಒಂದು ನೃತ್ಯಕೂಟವಿದೆಯೆಂದು ಅಲ್ಲಿಯ ರೆಸಿಡೆಂಟರು ನನ್ನೊಡನೆ ಹೇಳಿದರು. ಪ್ರಥಮ ದರ್ಶನ ಸಮಾರಂಭವು ನಡೆದ ಕೋಣೆಯಿಂದ ನಾವು ಇನ್ನೊಂದು ಭವ್ಯ ಕೋಣೆಗೆ ತೆರಳಿದೆವು. ಇದು ಕೋಟಾಯ್ ಸಂಸ್ಥಾನದ ಪ್ರಧಾನ ನೃತ್ಯಭವನ. ಗೋಡೆಗಳಲ್ಲಿ ವಿವಿಧ ಚಿತ್ರಗಳು ಬರೆಯಲ್ಪಟ್ಟಿದ್ದವು. ಒಂದೆಡೆಯಲ್ಲಿ ನುಣ್ಣೊಡೆಗಳನ್ನು ತೋರಿಸುವ ಸುಂದರಿಯು ತನ್ನ ದೇಹದ ಸುರಸೌಂದರ್ಯವನ್ನು ತೋರಿಸುವುದಿದ್ದರೆ ಇನ್ನೊಂದೆಡೆಯಲ್ಲಿ ಬಟ್ಟ ಕುಚಗಳನ್ನು ತೋರಿಸಿ ಮನಸೆಳೆಯುವ ನೀರೆಯೊಬ್ಬಳ ಮನಮೋಹಕ ಭಂಗಿ. ಬಲಗಡೆಯಲ್ಲಿ ನಳಿತೋಳ್ಗಳನ್ನು ತರುಣನೊಬ್ಬನ ಕೊರಳಿಗೆ ಸುತ್ತಿ ಬಲವಾಗಿ ಹಿಡಿದು ಮುದ್ದಿಸುತ್ತಿರುವ ಅರೆಬತ್ತಲೆ ತರುಣಿ. ಎಡಗಡೆಯಲ್ಲಿ ಜಗತ್ತಿನ ಆದಿ ಪುರುಷರಾದ ಆದಮ್ ಮತ್ತು ಹವ್ವಾ ಇವರಿಬ್ಬರೂ ನಗ್ನವಾಗಿದ್ದು ನಿಷೇಧಿಸಲ್ಪಟ್ಟ ಹಣ್ಣನ್ನು ಕೊಯ್ಯುವ ಕೈಯೊಂದು ಮೇಲೇರಿರುವಾಗ ಇನ್ನೊಂದು ಕೈ ಆದಮನ ಕೊರಳಿನ ಸುತ್ತುವರಿದ ಚಿತ್ರವಿತ್ತು.

**ಬೋರ್ನಿಯೋ ಸುಂದರಿಯರ ಸೌಂದರ್ಯದ ಮಾಟ!**

"ನಮ್ಮೆದುರಿಗಿದ್ದ ಬಾಗಿಲಿನಿಂದ ಒಬ್ಬೊಬ್ಬರೇ ವಿವಿಧ ಭಾವಭಂಗಿಗಳಲ್ಲಿ ಕುಣಿಯುವ ತರುಣಿಯರು ಹೊರಬಂದರು. ಕೋಣೆಯಲ್ಲಿ ನಾನು ಹಿಂದೆಂದೂ ಆಘ್ರಾಣಿಸದ ಪರಿಮಳವೊಂದು ಹರಡಿತ್ತು. ನೃತ್ಯದಲ್ಲಿ ಭಾಗವಹಿಸಿದವರೆಲ್ಲರೂ ತರುಣಿಯರಾಗಿದ್ದರು. ಸೊಂಟಕ್ಕೆ ಕಟ್ಟಿರುವ ಆ ದ್ವೀಪದ ಕೆಲವು ವಿಚಿತ್ರ ಸೋಗೆಗಳಲ್ಲದೆ ಮತ್ತಾವ ವಸನಗಳನ್ನೂ ಅವರು ಧರಿಸಿದ್ದಿಲ್ಲ. ಅವರು ತಿರುಗುವಾಗ ಬೆನ್ನ ಹಿಂದೆ ಬಿಗಿಯಲ್ಪಟ್ಟ ಕಟ್ಟನ್ನು ನೋಡುವಾಗ ಕ್ಷಿ ಸೊಗಸಾದ. ನಾರುಗಳಿಂದ

ಹೆಣೆದು ತಯಾರಿಸಿದ ನಾರಿನ ಬಟ್ಟೆಗಳಿಂದ ಅವರು ತಮ್ಮ ಮೊಲೆಗಳನ್ನು ಬಿಗಿದಿದ್ದರೆಂದು ಕಾಣುತ್ತಿತ್ತು. ಹದಿನೆರಡು ಮಂದಿ ಉಮೇದ್ವಾರರಾದ ವರರು ಬಹಳ ಕುತೂಹಲದಿಂದ ನೃತ್ಯವನ್ನು ನೋಡುತ್ತಿದ್ದರು. ವಿಚಿತ್ರ ಮದ್ದಲೆಯೊಂದರ ಸ್ವರವು ಕೇಳುವಾಗ ನರ್ತಕಿಯರು ತಮ್ಮ ಹೆಜ್ಜೆಗಳನ್ನು ಭಂಗಿಯಿಂದೆತ್ತಿದಾಗ ಅವರು ಧರಿಸಿದ ಸೋಗೆಗಳು ಅಸ್ತವ್ಯಸ್ತವಾದುದನ್ನು ನೋಡಿದಾಗ ಪ್ಯಾರಿಸಿನ ಇರುಳು ಕಥೆಯೊಂದನ್ನೋದಿದ ನೆನಪಾಯಿತು ನನಗೆ. ಒಂದು ತಾಸಿನ ತನಕ ನೃತ್ಯವು ನಡೆಯಿತು. ಇಡೀ ಕೋಣೆಯೇ ಕಾಮಪ್ರಚೋದಕ ವಸ್ತುಗಳಿಂದ ತುಂಬಿತ್ತು. ಗೋಡೆಯ ಮೇಲೆ ಚಿತ್ರಿಸಲ್ಪಟ್ಟ ಮೋಹೋದ್ರೇಕ ಚಿತ್ರಗಳು ನೋಡಿದೊಡನೆಯೇ ಎಂಥವರನ್ನೂ ಮರುಳುಗೊಳಿಸುವ ನವಜವ್ವನೆಯರಾದ ನರ್ತಕಿಯರ ಹಾವಭಾವ, ಸುಲ್ತಾನರ ಹಿಂದೆ ಕುಳಿತಿರುವ ಹಾರೆಮಿನ ಸ್ತ್ರೀಯರ ತಂಡ, ಆ ಪರಿಮಳ, ಆ ಹೂಮಾಲೆಗಳು– ಇವೆಲ್ಲಾ ಎಂಥವನನ್ನೂ ಉದ್ರೇಕಗೊಳಿಸುವಂತಿದ್ದವು.

**ವಿವಾಹ ಸಮಸ್ಯೆ.**

‘‘ಮರುದಿನ ಕೋಟೂಯ್ ನದಿಯ ತಟಾಕದಲ್ಲಿ ನಾವೆಲ್ಲರೂ ಕೂಡಿದ್ದೆವು. ದ್ವೀಪದ ಜನರ ಪದ್ಧತಿಯಂತೆ ತಳಿರು ತೋರಣಗಳು ಎಲ್ಲೆಡೆಗಳಲ್ಲಿಯೂ ಕಾಣಿಸುತ್ತಿದ್ದವು. ಮದುವೆಯಾಗುವುದೆಂದರೆ ಅದೊಂದು ದೊಡ್ಡ ಸಂಭ್ರಮವಾದಂತೆ ಎಂದು ಬ್ರಿಟಿಷ್ ರೆಸಿಡೆಂಟರು ನನ್ನೊಡನೆ ಹೇಳಿದರು. ‘‘ಗೌರವದ ಕೊಳ’’ವೆಂದು ಕೋಟೂಯ್ ನದಿಯ ಒಂದು ಭಾಗಕ್ಕೆ ಹೆಸರು. ಈ ‘‘ಕೊಳ’’ದ ಇನ್ನೊಂದು ತೀರದಲ್ಲಿ ಎತ್ತರವಾದ ಎರಡು ಬಿದಿರುಗಳು ನಡಲ್ಪಟ್ಟಿದ್ದವು.

**ವಧುವಿಗಾಗಿ ಪ್ರಾಣಹಾನಿ!**

‘‘ಕೊಳದ ತೀರದಲ್ಲಿ ಸುಲ್ತಾನರು, ದ್ವೀಪಾಧಿಪತಿಯು, ದಳಪತಿ, ರೆಸಿಡೆಂಟರು ಮತ್ತು ಕೋಟೂಯು ಯ ಎಲ್ಲಾ ಸ್ತ್ರೀಪುರುಷರು ವಿವಾಹ ಸ್ಪರ್ಧೆಯನ್ನು ನೋಡಲು ಸೇರಿದ್ದರು. ಹದಿನೆರಡು ಮಂದಿ ನದಿಯ ತೀರದಲ್ಲಿ ಸಾಲಾಗಿ ನಿಂತಿದ್ದರು. ವಿವಾಹಾಧಿಕಾರಿಯು ಸಂಜ್ಞೆ ಮಾಡಿದೊಡನೆಯೇ ಎಲ್ಲರೂ ನೀರಿಗೆ ಹಾರಬೇಕು. ಅರ್ಧ ಮೈಲು ದೂರದಲ್ಲಿರುವ ಬಿದಿರನ್ನು ಯಾವನು ಬೇಗನೆ ಈಜಿ ಮುಟ್ಟುತ್ತಾನೋ ಅವನೇ ವಧುವಿನ ವರನಾಗುತ್ತಾನೆ. ಮುಳುಗದೆ, ಆಯಾಸದಿಂದ ಬಸವಳಿಯದೆ ತನ್ನ ಶಕ್ತಿ ಸಾಮರ್ಥ್ಯಗಳನ್ನು ಯಾರು ತೋರಿಸಬಲ್ಲನೋ ಅವನೇ ಮದುವೆಯಾಗಲು ಶಕ್ತನೆಂಬುದೇ ಈ ಸ್ಪರ್ಧೆ ನಡೆಸಲು ಕಾರಣವಂತೆ.

**ಜೀವದ ಹಂಗು ತೊರೆದು ಈಜಾಡಿದ ತರುಣ.**

‘‘ಹದಿನೆರಡು ಮಂದಿ ಈಜುವುದನ್ನು ನಾವು ನೋಡುತ್ತಿದ್ದೆವು. ಬಹು ವೇಗದಿಂದ ಈಜುವಾಗ ಇಬ್ಬರು ಒಂದೆರಡು ನಿಮಿಷಗಳಲ್ಲಿ ಯೇ ಸೋತರು. ಮಿಕ್ಕುಳಿದವರು ಈಜಲಾಗಿ ಒಬ್ಬನು ೮ ನಿಮಿಷಗಳಲ್ಲಿ ಬಿದಿರನ್ನು ಮುಟ್ಟಿದನು. ಹೂಗಳಿಂದಲಂಕೃತವಾದ ದೋಣಿಯಲ್ಲಿ ಗೆದ್ದವನನ್ನು ನಾವಿದ್ದ ದಡಕ್ಕೆ ತಂದರು. ಕೂಡಲೆ ವಧುವು ಅವನ ಕೊರಳಿಗೆ ಹೂಮಾಲೆಯೊಂದನ್ನು ಹಾಕಿದಳು. ಪದ್ಧತಿಯಂತೆ ಇಬ್ಬರೂ ಬಲವಾಗಿ ಆಲಿಂಗನ ಮಾಡಿಕೊಂಡು ಅಷ್ಟು ಜನರೆದುರು ಮುದ್ದಾಡಿ ನಗುತ್ತಾ ವಿವಾಹಾಧಿಕಾರಿಯ ಬಳಿಗೆ ಬಂದರು.’’

———




'ಬಳೆ ತೊಟ್ಟ ಕೈ' ಎಂದೊಡನೆ ಹೇಡಿತನದ ಅರ್ಥ ಬರುತ್ತಿತ್ತು ಈ ವರೆಗೆ. ಕುಮಾರಿ ಶಾಂತಾ ಆಪ್ಟೆ ಅದನ್ನು ಸುಳ್ಳುಮಾಡಿಬಿಟ್ಟಳು!

‡ ‡ ‡

ಬಳೆಯು ಕೈಯ ರಕ್ತಸಂಚಾರ ವನ್ನು ತಡೆಯುವಷ್ಟು ಬಿಗಿಯಾಗಿ ನಿಲ್ಲುವುದಿಲ್ಲ-ಚಾಬೂಕು ಹಿಡಿಯ ಲಿಕ್ಕಾಗುತ್ತದೆ, ಹಿಡಿದು ಬಾರಿಸಲಿ ಕ್ಕಾಗುತ್ತದೆ.

‡ ‡ ‡

ಫಿಲ್ಮಿನಲ್ಲಿ ಅಲ್ಲ-'ಫಿಲ್ಮ್ ಇಂಡಿಯಾ' ಪತ್ರಿಕೆಯ ಸಂಪಾದಕರ ಕಛೇರಿಯಲ್ಲಿ ಶಾಂತಾ ಆಪ್ಟೆಯು ಚಾಬೂಕುವಾಲಿಯಾಗಿ ನಟಿಸಿ ಅದನ್ನು ರುಜುಪಡಿಸಿಕೊಟ್ಟಳು!

‡ ‡ ‡

ಮೊನ್ನೆ ಬೆಂಗಳೂರಿಗೆ ಬಂದಾಗಲೂ ಆಪ್ಟೆ ಹೇಳಿದುದಿಷ್ಟೆ-'ನಾನು ಚಾಬೂಕುವಾಲಿಯಾದುದು ಹಿಂದೀ ಸ್ತ್ರೀಯರ ಗೌರವದ ರಕ್ಷಣೆಗಾಗಿ!'

‡ ‡ ‡

ಆದರೆ ಎಲ್ಲಾ ಹಿಂದೀ ಸ್ತ್ರೀಯರ ಗೌರವದ ರಕ್ಷಣೆಯು ಶಾಂತಾ ಆಪ್ಟೆ ಯೊಬ್ಬಳಿಂದಾಗದು. ಎಷ್ಟೋ ಹಿಂದೀ ಸ್ತ್ರೀಯರ ಗೌರವವು ರಕ್ಷಣೆ ಯಿಲ್ಲದೆ ಬಾಕಿ ಬಿದ್ದುಕೊಂಡಿದೆ.

‡ ‡ ‡

ಎಲ್ಲಾ ಮಹಿಳೆಯರೊಡನೆ ಚಾಬೂಕು ಇರುವುದೂ ಇಲ್ಲ; ನಟಿ ಆಪ್ಟೆಯಂತೆ ಅವರ ಕೈ ಚಾಲಾಕು ಇರುವದೂ ಇಲ್ಲ.

‡ ‡ ‡

ಹೀಗಾಗಿ ತಾನು ಮಾಡಿದುದಕ್ಕಲ್ಲ-ತನ್ನಂತೆ ಎಲ್ಲಾ ಮಹಿಳೆಯರೂ ಮಾಡಲಾರರೆಂಬುದಕ್ಕಾಗಿ ಕುಮಾರಿ ಆಪ್ಟೆ ವ್ಯಸನ ಪಡದಿರಲಾರಳು!

---

ಮದ್ರಾಸು ಗವರ್ನರರು ಕಾಂಗ್ರೆಸ್ ಮಂತ್ರಿಗಳಿಗೆ ಮೆಚ್ಚಿಹೋಗಿದ್ದಾರೆ. 'ಗವರ್ನರರನ್ನು ಮೆಚ್ಚಿಸಲು ನೋಡಬೇಡಿರಿ' ಎಂದು ಯಾರೆಷ್ಟು ಹೇಳಿದರೂ ಕೇಳದೆ ನಮ್ಮ ಕಾಂಗ್ರೆಸ್ ಮಂತ್ರಿಗಳು ಅವರನ್ನು ಮೆಚ್ಚಿಸಿ ಬಿಟ್ಟಿದ್ದಾರೆ.

‡ ‡ ‡

ಆದರೆ ಕಾಲದ ಬದಲಾವಣೆಯನ್ನು ಗಮನಿಸಬೇಕು. ಈ ಕಾಲದಲ್ಲಿ ಬ್ರಿಟಿಷರನ್ನು ಮೆಚ್ಚಿಸುವ ರೀತಿಯು ಹಿಂದಿನಂತಲ್ಲ.

‡ ‡ ‡

ಬ್ರಿಟಿಷ್ ಪ್ರಧಾನರಾದ ಚೇಂಬರ್ಲೇನರು ಹಿಟ್ಲರನಿಗೆ ಮೆಚ್ಚಿಹೋದರು. ಹಾಗೆಯೇ ನಮ್ಮ ಪ್ರಾಂತ್ಯದ ಗವರ್ನರರು ನಮ್ಮ ಮಂತ್ರಿಗಳಿಗೆ ಮೆಚ್ಚಿಬಿಟ್ಟರೆ ನಮಗೇನೂ ನಷ್ಟವಿಲ್ಲ!

---

ಕವಿಗಳ ಕಾಳಗವನ್ನು ನೀವು ನೋಡಿರಲಾರಿರಿ. ಅದು ನೋಡಲಾಗುವಂತಹದಲ್ಲ-ಕೇಳಬಹುದು.

‡ ‡ ‡

ಕೇಳಿ. ನಮ್ಮ ಕವಿ ಸಾಮ್ರಾಟ್ ಠಾಗೋರರಿಗೂ ಜಪಾನಿನ ಕವಿ ಚಕ್ರವರ್ತಿ ಯೋನ್ ನೊಗುಚಿಯವರಿಗೂ ಜಪಾನಿನ ಧೋರಣೆಯ ಕುರಿತು ಕಾಳಗವೆದ್ದಿದೆ.

‡ ‡ ‡

ಚೀನದಲ್ಲಿ ಜಪಾನು ಕೈಕೊಂಡ ಧೋರಣೆಯನ್ನು ಖಂಡಿಸಿ ಕವಿ ರವೀಂದ್ರರು ಒಂದು ಹೇಳಿಕೆ ಯಿತ್ತರು. ಕವಿ ಹೃದಯವಲ್ಲವೇ-ಅದು ಹೋಗಿ ನೊಗುಚಿಯವರ ಹೃದಯಕ್ಕೇ ನಾಟಿತು, ನಾಟಿ ನೋವನ್ನುಂಟುಮಾಡಿತು.

‡ ‡ ‡

'ಏಸ್ಯಾದ ಇತರ ರಾಷ್ಟ್ರಗಳನ್ನು ತನ್ನ ಸಾಲಿನಲ್ಲಿ ನಿಲ್ಲಿಸಿಕೊಳ್ಳುವ ಅಧಿಕಾರವು ಜಪಾನಿಗಿದೆ' ಎಂದು ಅವರು ಉತ್ತರವಿತ್ತರು!

‡ ‡ ‡

ಹಿಂದೂದೇಶವೂ ಏಸ್ಯಾ ಖಂಡದಲ್ಲಿದೆ. ಹೀಗಿದ್ದ ಮೇಲೆ ಹಿಂದೂದೇಶವು ಜಪಾನಿನ ಸಾಲಿನಲ್ಲೂ ರವೀಂದ್ರರು ನೊಗುಚಿಯವರ ಲೈನಿನಲ್ಲೂ ನಿಲ್ಲಲೇ ಬೇಕಲ್ಲವೆ?

‡ ‡ ‡

ಆದರೆ ಕವಿ ಠಾಗೋರರು ಹಾಗೆ ಮಾಡಲಿಲ್ಲ. ಹೋಗಲಿ, ಸಾಲಿನಲ್ಲಿ ನಿಲ್ಲದಿದ್ದರೂ ದೂರದಲ್ಲಿದ್ದಂತೆಯೇ ಕೈಯೆತ್ತಿ ತೋರಿಸುವ ಉಪಕಾರವನ್ನಾದರೂ ಮಾಡಬಹುದಿತ್ತು, ಅದೂ ಆಗುವುದಿಲ್ಲವಂತೆ!

‡ ‡ ‡

'ನಾನು ನಿಮ್ಮ ಜಪಾನಿನ ಕಡೆಗೆ ಇನ್ನು ಮುಂದೆ ಮಾದರಿಗಾಗಿ ಬೆಟ್ಟು ತೋರಿಸಲಾರೆನೆಂದು ನಾಚುಗೆ ಮತ್ತು ವ್ಯಸನದಿಂದ ಹೇಳುತ್ತೇನೆ' ಎನ್ನುತ್ತಾರೆ ಠಾಗೋರರು.

‡ ‡ ‡

ಇಬ್ಬರೂ ಕವಿಗಳು. ಆದುದರಿಂದ ಈ ಮಾತು ಹೇಳುವಾಗ ಇವರಿಗಾದಷ್ಟೆ ವ್ಯಸನ ಮತ್ತು ನಾಚುಗೆಯು ಕೇಳುವಾಗ ಅವರಿಗೂ ಆಗಿರಬಹುದು!

—ದೂಮ.

---

ಗೆಳೆಯರ ತಂಡದ ಸದಸ್ಯರಾಗಿ ಅಖಿಲ ಕರ್ನಾಟಕದ ಗೆಳೆಯರೊಡನೆ ಸಂಬಂಧ ಬೆಳೆಸಿರಿ.

# ಗೆಳೆಯರ ತಂಡ

[ ಇಪ್ಪತ್ತೈದು ವರ್ಷಗಳಿಗೆ ಕಿರಿದಾದ ತರುಣ ತರುಣಿಯರಿಗೆ ಮಾತ್ರ. ]

ಗೆಳೆಯರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸಿ ನಿಮ್ಮ ಲೋಕಜ್ಞಾನವನ್ನು ಹೆಚ್ಚಿಸಿರಿ.

ಗೆಳೆಯರ ತಂಡಕ್ಕೆ ಬರೆಯುವಾಗ "ಗೆಳೆಯರ ತಂಡ", C/o ಅಂತರಂಗ, ಉಡುಪಿ, ಎಂದು ಬರೆಯಿರಿ.

ಒಲವಿನ ಗೆಳೆಯರೆ,

ಈ ಬಾರಿ 'ಅಂಚೆಚೀಟಿನ ಪ್ರಪಂಚ'ವೆಂಬೊಂದು ವಿಭಾಗವನ್ನು ಗೆಳೆಯರಿಗಾಗಿ ಪ್ರಾರಂಭಿಸಲಾಗಿದೆ. ಅಂಚೆ ಚೀಟನ್ನು ಸಂಗ್ರಹಿಸುವುದರಿಂದ ಜಗತ್ತಿನ ಭೌಗೋಲಿಕ ಹಾಗೂ ಇನ್ನಿತರ ವಿಚಾರಗಳನ್ನು ತಿಳಿದಂತಾಗುತ್ತದೆ. ಹಲವರಿಗೆ ಇದೊಂದು ವೃತ್ತಿಯಾಗಿದೆ. ಹೆಚ್ಚಿನವರು ಇದನ್ನೊಂದು ಅಚ್ಚು ಕಸುಬನ್ನಾಗಿ ಆರಿಸಿಕೊಂಡಿದ್ದಾರೆ. ಈಗಾಗಲೆ ಸದಸ್ಯರಾಗಿರುವ ಗೆಳೆಯರಲ್ಲಿ ಯಾರೊಡನಾದರೂ ವಿಚಿತ್ರವಾದ ಅಂಚೆಚೀಟುಗಳಿದ್ದರೆ ಆ ಕುರಿತು ಬರೆಯಬಹುದಾದ ಚಿಕ್ಕ ಬರಿಹಗಳಿಗೆ ಸ್ವಾಗತ.

ಕೆಲವೇ ವಾರಗಳಲ್ಲಿ ಕರ್ನಾಟಕ ಏಕೀಕರಣದ ಕುರಿತು ಒಂದು ಸ್ಪರ್ಧೆಯನ್ನು ಪ್ರಾರಂಭಿಸಲಿದ್ದೇನೆ. ಗೆಳೆಯರು ಇದರಲ್ಲಿ ಭಾಗವಹಿಸದಿರಲಾರರೆಂದು ನನಗೆ ಭರವಸೆಯಿದೆ.

ತಂಡದ ಸದಸ್ಯರ ಸಂಖ್ಯೆಯು ೫೦ಕ್ಕಿಂತ ಮಿಕ್ಕಿದೊಡನೆ ಗೆಳೆಯರ ಭಾವಚಿತ್ರಗಳನ್ನು ಪ್ರಕಟಿಸುವ ಏರ್ಪಾಡು ಮಾಡಲಿದ್ದೇನೆ. ಆದುದರಿಂದ ಈಗಾಗಲೆ ಗೆಳೆಯರಾಗಿರುವವರು ಇತರರನ್ನು ಸೇರಿಸುವ ಯತ್ನ ಮಾಡಬೇಕಾಗಿ ಕೋರಿಕೆ.

ಇತಿ ನಿಮ್ಮ,

"ಗೆಳೆಯ"

೦೦೦

**ತಂಡದ ಹೊಸ ಸದಸ್ಯರು.**

೧. ಶ್ರೀ. ವ್ಯಾಕರಣ ನರಸಿಂಹಮೂರ್ತಿ, ೧೧, ಮೊಡೆಲ್ ಹೌಸ್ ಸ್ಟ್ರೀಟ್, ಬಸವನಗುಡಿ, ಬೆಂಗಳೂರು ಸಿಟಿ.
ನಿಮ್ಮ ಸದಸ್ಯತನದ ನಂಬರು ೧.

೦೦೦

೨. ಮಿ। ಎಸ್. ಕೆ. ಕರೀಂಖಾನ್, ಶಕಲೇಶಪುರ
ನಿಮ್ಮ ಸದಸ್ಯತನದ ನಂಬರು ೨.






# ಅಂಚೆ ಚೀಟಿನ ಪ್ರಪಂಚದಲ್ಲಿ—

**ಹಿಟ್ಲರನ ಹೊಸಚೀಟು.**

[ಜೋಹಾನ್ಸ್‌ಬರ್ಗ್‌ನಲ್ಲಿ ಬ್ರಿಟಿಷ್ ಪ್ರಧಾನರಾದ ಮಿ। ಚೇಂಬರ್ಲೇನರಿಗೂ ಜರ್ಮನಿಯ ಸರ್ವಾಧಿಕಾರಿ ಹೆರ್ ಅಡಾಲ್ಫ್ ಹಿಟ್ಲರನಿಗೂ ಸ್ಯುಡೇಟನ್ ಪ್ರಾಂತ್ಯದ ಕುರಿತು ನಡೆದ ಶಾಂತಿ ಸಂಭಾಷಣಾಕಾಲದಲ್ಲಿ, ಜರ್ಮನಿಯು ಹಿಟ್ಲರನ ಭಾವಚಿತ್ರಗಳನ್ನೊಳಗೊಂಡ ನವೀನ ಅಂಚೆಚೀಟನ್ನು ಹೊರಡಿಸಿತು. ಮಾತುಕತೆಗಳು ನಡೆಯುತ್ತಿದ್ದಾಗ ಪ್ರತಿಯೊಂದು ಅಂಚೆ ಆಫೀಸಿನಲ್ಲಿ "ಚೇಂಬರ್ಲೇನ್–ಹಿಟ್ಲರ್–ಗೋಡೆಸ್‌ಬರ್ಗ್" ಎಂಬ ಶಬ್ದಗಳನ್ನೊಳ

(ಮುಂದಿನ ಪುಟ ನೋಡಿರಿ)

(೧೫ನೆ ಪುಟದಿಂದ)

ಅದರ ಭಗ್ನಾವಶೇಷಗಳು ಈಗ ನಮಗೆ ಕಾಣಿಸುತ್ತಿವೆ. ದೊಡ್ಡ ರಾಷ್ಟ್ರಗಳು ಇದನ್ನು ಧಾರಾಳವಾಗಿ ಉಪಯೋಗಿಸಿ ತಮ್ಮ ಹಿತಸಂಬಂಧಗಳಿಗೆ ತೊಂದರೆಯುಂಟಾಗುವ ಸಂದರ್ಭಗಳಲ್ಲಿ ಅದನ್ನು ಕಡೆಗಣಿಸಿ

ಗೊಂಡ ಮುದ್ರೆಯನ್ನುಪಯೋಗಿಸಿತು. ಈ ಚೀಟುಗಳಿಂದ ಸಂಪಾದನೆಯಾದ ಹಣವನ್ನು ಹಿಟ್ಲರನು ದಾನಮಾಡಿದನಂತೆ.



## ಫ್ರಾನ್ಸಿನ ವಿಚಿತ್ರ ಚೀಟುಗಳು!

ಫ್ರಾನ್ಸು ಇತ್ತೀಚೆಗೆ ಕೆಲವು ವಿಚಿತ್ರ ಸ್ಟಾಂಪುಗಳನ್ನು ಮುದ್ರಿಸಿ ಪ್ರಕಟಿಸಿದೆ. ಅವುಗಳಲ್ಲಿ ಕೆಲವು ಬಹಳ ಸ್ವಾರಸ್ಯದವುಗಳಾಗಿವೆ. ೨೦ ಫ್ರಾಂಕಿನ ಚೀಟಿನಲ್ಲಿ ಬ್ರಿಟಾನಿಯ ಪ್ರಖ್ಯಾತ ಬಂದರವಾದ ಸೈಂಟ್ ಮಾಲೋ- ಅದರ ಒಂದು ದೃಶ್ಯವು ಮುದ್ರಿಸಲಾಗಿದೆ. ಆ ಚಿತ್ರವನ್ನು ಸೂಕ್ಷ್ಮವಾಗಿ ನೋಡಿದರೆ ಆ ಕಟ್ಟಡ ಕಟ್ಟಿ ೭೦೦ ವರುಷಗಳಾದ ಬಳಿಕ ಅದಕ್ಕೆ ಸೇರಿಸಿದ ಮಾಳಿಗೆ ಮೆಟ್ಟಲಿನ ನಕಾಶೆಯೊಂದು ಕಾಣುತ್ತದೆ.



## ವರ್ಸೇಲಿಸ್ ಅರಮನೆ.

ಫ್ರೆಂಚ್ ರಾಜರ ಪ್ರಖ್ಯಾತ ಅರಮನೆಯಾದ ವರ್ಸೇಲಿಸ್ ಭವನವು ೭೫ ಸೇಂಟ್ಸಿನ ಅಂಚೆ ಚೀಟುಗಳಲ್ಲಿ ಚಿತ್ರಿಸಲ್ಪಟ್ಟಿದೆ. ಈ ಚೀಟುಗಳು ಫ್ರೆಂಚ್ ರಾಷ್ಟ್ರೀಯ ಸಂಗೀತ ಹಬ್ಬಗಳ ಸಹಾಯಕ್ಕಾಗಿ ಹೊರಡಿಸಲ್ಪಟ್ಟವು. ಈ ಅರಮನೆಯ ಕಟ್ಟಡಗಳು ಫ್ರೆಂಚ್ ಚೀಟುಗಳಲ್ಲಿ ಅನೇಕ ಬಾರಿ ಮುದ್ರಿಸಲ್ಪಟ್ಟಿದ್ದರೂ ಇಷ್ಟೊಂದು ಸುಂದರವಾಗಿ ಅದು ಕಂಡಿರುವುದು ಇದೇ ಮೊದಲನೆಯ ಬಾರಿಯೆಂದು ಹೇಳಲಾಗಿದೆ.



## ಚೆಂಪೇನ್ ವೈನ್!

೭೫ ಸೆಂಟ್ಸಿನ ಇನ್ನೊಂದು ಚೀಟಿನಲ್ಲಿ ಚೆಂಪೇನ್ ವೈನು ಎಲ್ಲಿಂದ ಬರುತ್ತಿದೆಯೆಂಬುದನ್ನು ಚಿತ್ರಿಸಿದ್ದಾರೆ. ಚೆಂಪೇನ್ ಜಿಲ್ಲೆಯ ಹುಡುಗಿಯೊಬ್ಬಳು ರಾಷ್ಟ್ರೀಯ ಪೋಷಾಕನ್ನು ತೊಟ್ಟು ತನ್ನ ಜಿಲ್ಲೆಯ ವೈನನ್ನು ತೋರಿಸುತ್ತಿದ್ದಾಳೆ. ಈ ಚೀಟುಗಳು ಚೆಂಪೇನ್ ವೈನನ್ನು ಕಂಡು ಹಿಡಿದ ಬೆನೆಡಿಕ್ಟಾಯ್ನ್ ಪಾದ್ರಿ ಡೋಮ್ ಪೆರಿಗ್ನನ್-ಎಂಬವನ ಮುನ್ನೂರೊಂದನೆಯ ಜನ್ಮದಿನೋತ್ಸವದಂದು ಪ್ರಕಟಿಸಲ್ಪಟ್ಟವು.

ಡೋಮ್ ಪೆರಿಗ್ನನ್ ಎಂಬೀ ಮಹಾಶಯನು ಹಾಟ್ ವಿಲ್ಲಿಯರ್ಸ್ ಎಬ್ಬಿಯ ಬಳಿಯಲ್ಲಿದ್ದ ದ್ರಾಕ್ಷಿಗೆ ವಿವಿಧ ವಸ್ತುಗಳನ್ನು ಸೇರಿಸಿ ಚೆಂಪೇನ್ ಎಂಬ ವೈನನ್ನು ಕಂಡು ಹಿಡಿದನು. ಇದು ಫ್ರಾನ್ಸಿನದೊಡ್ಡ ಕೈಗಾರಿಕೆಗಳಲ್ಲೊಂದಾಗಿದೆ. ಸಾವಿರಾರು ಜನರು ಈ ಕೈಗಾರಿಕೆಯಲ್ಲಿ ಭಾಗವಹಿಸುತ್ತಿದ್ದಾರೆ.



## ವಿಮಾನಗಳ ಜನಕನಿಗಾಗಿ!

೧೮೭೫ರಲ್ಲಿ ಕ್ಲೆಮೆಂಟ್ ಆಡರ್ ಎಂಬೊಬ್ಬ ಫ್ರೆಂಚರವನು ಒಣ್ಣಿ ತೋಪ್ಪರ್ (ಅಥವಾ ರೆಕ್ಕೆಗಳ ಸಹಾಯದಿಂದ ಹಾರುವ ವಿಮಾನ) ವನ್ನು ಕಂಡು ಹಿಡಿದಿರುವುದಕ್ಕಾಗಿ ಅವನ ಸ್ಮಾರಕಕ್ಕಾಗಿ ೫೦ ಫ್ರಾಂಕುಗಳ ಒಂದು ಚೀಟನ್ನು ಫ್ರೆಂಚ್ ಸರಕಾರದವರು ಪ್ರಕಟಿಸಿದ್ದಾರೆ.



## ಮಸುಕು ಚೀಟುಗಳು!

ಚೀಟುಗಳ ಬಣ್ಣವು ಸರಿಯಾಗಿ ಕೆಲವೊಮ್ಮೆ ಕಾಣದಿರುವುದರಿಂದ ಹಲವು ಚೀಟು ಸಂಗ್ರಾಹಕರು ದಿಙ್ಮೂಢರಾಗಿದ್ದಾರೆ.

---

(ಹಿಂದಿನ ಪುಟದಿಂದ)

ತಮ್ಮ ಸೃಷ್ಟಿಯನ್ನೇ ಅವಮಾನಿಸಿದ್ದಾರೆ. ಎಲ್ಲಾ ರಾಷ್ಟ್ರಗಳು ನೀತಿಯ ನೆಲೆಗಟ್ಟಿನ ಮೇಲೆ ತಮ್ಮ ಚಟುವಟಿಕೆಗಳನ್ನು ನಡೆಸುವುದಿದ್ದರೆ ಈ ಜನಾಂಗಸಭೆಯು ಉಪಯುಕ್ತ ಸಂಸ್ಥೆಯಾಗುತಿತ್ತು. ಆದರೆ ವನ್ಯ ಜಂತುಗಳ ಧೋರಣೆಯನ್ನು ಅನುಕರಿಸುವ ಸರ್ವಾಧಿಕಾರಿಗಳೆಡೆಯಲ್ಲಿ, ಅವರು ಹೇಳಿದಂತೆ ಕುಣಿಯುತ್ತಿರುವ ವಿಚಿತ್ರ ಪ್ರಜಾಸತ್ತಾತ್ಮಕ ರಾಷ್ಟ್ರಗಳೆಡೆಯಲ್ಲಿ, ಹೆಚ್ಚೇಕೆ- ಪರಸ್ಪರ ಕೊರಳುಕೊಯ್ಕರ ಮಧ್ಯದಲ್ಲಿ ಜನಾಂಗ ಸಭೆಯಂಥ ಸಂಸ್ಥೆಯು ಈಗಿನಂತಿರುವುದಕ್ಕಿಂತ ಅದರ ಮೇಲೊಂದು ಗೋರಿಯನ್ನು ಕಟ್ಟುವುದು ಬಹಳ ಲೇಸು.

---

ಅಂತರಂಗ

ಆದಿತ್ಯವಾರ, ನವಂಬರ ೬, ೧೯೩೮.

# ಫೆಡರೇಷನ್.

ಫೆಡರಲ್ ಯೋಜನೆಯನ್ನು ಭಾರತದಲ್ಲಿ ಜಾರಿಗೆ ತರುವ ಕುರಿತು ಇತ್ತೀಚೆಗೆ ಪ್ರಚಂಡ ಪ್ರಚಾರವು ನಡೆಯುತ್ತಿರುವುದಲ್ಲದೆ, ಬ್ರಿಟಿಷ್ ಅಧಿಕಾರಿಗಳು ಕೂಡಾ ಭಾರತದ ಎಲ್ಲಾ ಪಕ್ಷಗಳ ಏಕರೀತಿಯ ವಿರೋಧವನ್ನು ಮನಗಂಡಿದ್ದಾರೆ. ಸಂಸ್ಥಾನಗಳಲ್ಲಿ ಜವಾಬ್ದಾರೀ ಸರಕಾರವನ್ನು ಜಾರಿಗೆ ತರದಿದ್ದರೆ ಫೆಡರೇಶನಿನ ಕುರಿತು ಮಾತಾಡುವುದು ನಿಷ್ಪ್ರಯೋಜನವೆಂದು ಸರ್ದಾರ್ ಪಟೇಲರು ಹೇಳಿದ್ದಾರೆ. ನರೇಂದ್ರರೊಡನೆ ಮಾಡಿಕೊಂಡ ಒಪ್ಪಂದಗಳಲ್ಲಿ ಯಾವ ಬದಲಾವಣೆಯನ್ನೂ ಮಾಡದೆ ಎಲ್ಲರಿಂದಲೂ ವಿರೋದಿಸಲ್ಪಟ್ಟ ಈ ಯೋಜನೆಯನ್ನು ಹೇಗಾದಗೂ ಜಾರಿಗೆ ತರಬೇಕೆಂಬ ನಿರ್ಣಯವನ್ನು ಬ್ರಿಟಿಷ್ ಅಧಿಕಾರಿಗಳು ಮಾಡಿದಂತಿದೆ. ಇದಕ್ಕಾಗಿಯೇ ಬರುವ ಫೆಬ್ರವರಿಯಲ್ಲಿ ವೈಸರಾಯರು ಮೈಸೂರು, ತಿರುವಾಂಕೂರು, ಬರೋಡ ಇವೇ ಮೊದಲಾದ ಸಂಸ್ಥಾನಗಳನ್ನು ಸಂದರ್ಶಿಸುವುದರಲ್ಲಿದ್ದಾರೆ. ಇವೆಲ್ಲವನ್ನು ನೋಡುವಾಗ ಬ್ರಿಟಿಷರು ತಯಾರಿಸಿದ ಫೆಡರಲ್ ಯೋಜನೆಯನ್ನು ವಿರೋಧಿಸಿ ಅವರ ಸಾಮ್ರಾಜ್ಯಶಾಹೀ ಧೋರಣೆಯನ್ನು ಭಾರತೀಯರ ಮೇಲೆ ಜಾರಿಗೆ ತರದಂತೆ ಮಾಡಲು ಎಷ್ಟು ಯತ್ನಿಸಿದರೂ ಸಾಲದೆಂಬುದು ಸ್ಪಷ್ಟವಾಗುತ್ತದೆ. ಸಂಸ್ಥಾನಗಳಲ್ಲಿ ಜವಾಬ್ದಾರೀ ಸರಕಾರಕ್ಕಾಗಿ ಚಳವಳಗಳು ಪ್ರಾರಂಭವಾಗಿರುವುದೂ, ನರೇಂದ್ರರು ಇವುಗಳಿಂದಾಗಿ ದಿಙ್ಮೂಢರಾಗಿರುವುದೂ, ಬ್ರಿಟಿಷ್ ಅಧಿಕಾರಿಗಳು ಪ್ರಾಂತಿಕ ಸರಕಾರಗಳ ಅಭಿಪ್ರಾಯಗಳಿಗೆ ಮನ್ನಣೆಯನ್ನೀಯುತ್ತಿರುವುದೂ ಫೆಡರಲ್ ಯೋಜನೆಯಲ್ಲಿ ಹಲಕೆಲವು ವ್ಯತ್ಯಾಸವಾಗಲಿರುವುದಕ್ಕೆ ಸಾಕ್ಷಿಯಾಗಿವೆ.

ಪ್ರಾಂತಿಕ ಸ್ವಾಯತ್ತೆಯನ್ನು ಸ್ವೀಕರಿಸಿರುವುದರಿಂದ ಎಷ್ಟು ಪ್ರಯೋಜನವಾಗಿದೆಯೆಂಬುದಕ್ಕೆ ಈಗಿನ ಕಾಂಗ್ರೆಸ್ ಪ್ರಾಂತ್ಯಗಳೇ ನಿದರ್ಶನಗಳಾಗಿವೆ. ಕೇಂದ್ರಾಧಿಕಾರವಿಲ್ಲದೆ ಯಾವ ಉಪಯುಕ್ತ ಕೆಲಸವನ್ನು ಮಾಡುವುದೂ ಅಸಾಧ್ಯವಾದುದರಿಂದ ಕಾಂಗ್ರೆಸ್ "ಮಹಾಕೂಟ"ದವರು ಈಗಿನ ಫೆಡರಲ್ ಯೋಜನೆಯಲ್ಲಿ ಬದಲಾವಣೆಯಾಗಬೇಕೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ಬ್ರಿಟಿಷರ ಮಧುರ ಆಶ್ವಾಸನೆಗಳಿಗೆ ಮನಸೋತು, ಹಲ ಕೆಲವು ಅಲ್ಪ ಬದಲಾವಣೆಗಳೊಡನೆ ಫೆಡರೇಶನನ್ನು ಸ್ವೀಕರಿಸಿದರೆ ಪರಿಣಾಮವು ಹೇಗಾಗಬಹುದೆಂದು ಹೇಳಬೇಕಾಗಿಲ್ಲ. ಈ ತನಕ ಭಾರತದ ಸ್ವಾತಂತ್ರ್ಯ ಚಳವಳದ ಅಧಿನಾಯಕತ್ವವನ್ನು ವಹಿಸಿರುವ ಗಾಂಧಿಜಿಯವರ ನಾಯಕತ್ವದಲ್ಲಿ ರಾಷ್ಟ್ರವು ಇನ್ನೂ ಪೂರ್ಣ ವಿಶ್ವಾಸವಿಟ್ಟಿರುವುದರಿಂದ ಅವರು ಸೂಚಿಸಬಹುದಾದ ವಿಧಾನವೇ ಮನ್ನಿಸಲ್ಪಡುವುದರಲ್ಲಿ ನಿಸ್ಸಂಶಯ. ಭಾರತದ ಸಂಸ್ಥಾನಗಳ ರಥವು ಹಳೆ ದಾರಿಯಲ್ಲೇ ನಡೆಯುತ್ತಿರುವುದರಿಂದ, ನರೇಂದ್ರರು ಪ್ರಜೆಗಳಿಗೆ ನಿಜವಾದ ಜವಾಬ್ದಾರೀ ಸರಕಾರವನ್ನು ಕೊಡುವುದು ಸಂಶಯಾಸ್ಪದವಾಗಿದೆ. ಜವಾಬ್ದಾರೀ ಸರಕಾರವು ಸಂಸ್ಥಾನಗಳಿಗೆ ದೊರೆಯದಿದ್ದರೆ ಫೆಡರೇಶನ್ ಕೂಡಾ ಬೇಗನೆ ಜಾರಿಗೆ ಬರುವಂತಿಲ್ಲ. ಪಂಡಿತ ನೆಹರುಗಳು ಲಂಡನಿನಲ್ಲಿ ಸಂಸ್ಥಾನಗಳ ಸುದ್ದಿಯನ್ನು ಕೇಳಿ "ಈ ಅಸಹನೀಯ ಪರಿಸ್ಥಿತಿಯನ್ನು ಕೊನೆಗೊಳಿಸುವುದು ಅತ್ಯವಶ್ಯವಾಗಿದೆ. ಸಂಸ್ಥಾನ ಪ್ರಜೆಗಳ ಚಳವಳದ ಧುರೀಣತೆಯನ್ನು ನಾನೇ ವಹಿಸುತ್ತೇನೆ' ಎಂದಿದ್ದಾರೆ. ಪರಿಸ್ಥಿತಿಯು ಹೀಗಿರುವುದರಿಂದ ಫೆಡರೇಶನಿನ ಆಗಮನವು ಸಂಸ್ಥಾನಗಳ ಪರಿಸ್ಥಿತಿಯ ಮೇಲೆ ಹೊಂದಿಕೊಂಡಿದೆಯೆಂದು ಭಾವಿಸಬಹುದೆ?

---

# ಜಗತ್ತಿಗೆ ಎಂಟನೆ

## "ಪ್ರೀತಿಸುವ ಮಡದಿ
## ಹೊಣೆಗಾರಿಕೆಯನ

೭ನೆ

ಎಂಟನೆಯ ಎಡ್ವರ್ಡರು ಹೇಗೆ ಸಿಂ
ಹೇಳಲಾಗಿದೆ. ಮುಂದಿನ **ಲೇಖ**
ಯೋಗ್ಯಾಯೋಗ್ಯತೆಯು **ಚರ್ಚಿಸ**
ರರು ಏನು ಮಾಡುವರೆಂಬ **ಅಪೂರ**
ಪ್ರೀತ ರಾಜರ ಸ್ವತಂತ್ರ **ಮನೋವ**
ಗಳು ಎಂತಹ **ಕುಯುಕ್ತಿ**



ಡ್ಯೂಕ್ ಆಫ್ ವಿಂಡ್ಸರರ ಈಗಿನ ಫ್ರೆಂಚ್ ನಿವಾಸವಾದ ಚೆಟೋ ಡಿಲಾ ಕ್ರಾಸ್‌ನಲ್ಲಿ ತೆಗೆದ ವಿಂಡ್ಸರ್ ದಂಪತಿಗಳ ಭಾವಚಿತ್ರ.

ಹೌಸ್ ಆಫ್ ಕಾಮನ್ಸಿನ ಸ್ಪೀಕರರು ಎಂಟನೆಯ ಎಡ್ವರ್ಡರ ಸಿಂಹಾಸನತ್ಯಾಗ ಪತ್ರವನ್ನು ಹೀಗೆಂದೋದಿದರು:

"ಗ್ರೇಟ್ ಬ್ರಿಟನ್, ಐಯರ್ಲೇಂಡ್ ಮತ್ತು ಸಾಗರದಾಚೆಯಿರುವ ವಸಾಹತುಗಳ ರಾಜ ಮತ್ತು ಇಂಡಿಯದ ಚಕ್ರವರ್ತಿ ಎಂಟನೆ ಎಡ್ವರ್ಡನಾದ ನಾನು ಸಿಂಹಾಸನ ತ್ಯಾಗಮಾಡಬೇಕೆಂಬ ದೃಢಸಂಕಲ್ಪಮಾಡಿರುವದಲ್ಲದೆ ಈ ತ್ಯಾಗಪತ್ರವು ಕೂಡಲೆ ಜಾರಿಗೆ ಬರಬೇಕಾಗಿದೆ.

"೧೯೩೬ನೆ ದಶಂಬರ ೧೦ರಂದು ನಾನೀ ಪತ್ರಕ್ಕೆ ಕೆಳಗೆ ಸಹಿಹಾಕಿದ ಸಾಕ್ಷಿಗಾರರ ಮುಂದೆ ಸಹಿ ಮಾಡಿರುತ್ತೇನೆ.

(ಸಹಿಯಾಗಿದೆ.) ಎಡ್ವರ್ಡ್ R. I.

"ನನ್ನೀ ತ್ಯಾಗಪತ್ರಕ್ಕೆ ನನ್ನ ಸಹೋದರರಾದ ಡ್ಯೂಕ್ ಆಫ್ ಯಾರ್ಕ್, ಡ್ಯೂಕ್ ಆಫ್ ಗ್ಲೌಸೆಸ್ಟರ್, ಮತ್ತು ಡ್ಯೂಕ್ ಆಫ್ ಕೆಂಟರು ಸಾಕ್ಷಿಯಾಗಿದ್ದಾರೆ."

"ಈ ಕುರಿತು ಬೇರೆ ನಿರ್ಣಯಗಳನ್ನು ಮಾಡಬೇಕೆಂಬ ಬಿನ್ನಹಗಳಿಗಾಗಿ ನಾನು ಬಹಳ ಕೃತಜ್ಞನಾಗಿದ್ದೇನೆ; ಅಲ್ಲದೆ ಆ ಸೂಚನೆಗಳನ್ನು ನಾನು ಕೂಲಂಕಷವಾಗಿ ಚರ್ಚಿಸಿದ್ದೇನೆ. ಈ ವಿಚಾರದಲ್ಲಿ ನಾನು ದೃಢವಾದ ನಿಶ್ಚಯವನ್ನು ಮಾಡಿಯಾಯಿತು. ವಿಳಂಬವಾದರೆ ನಾನು ಪ್ರಿನ್ಸ್ ಆಫ್ ವೇಲ್ಸ್ ಹಾಗೂ ರಾಜನಾಗಿದ್ದಾಗ ಯಾವ ಜನರ ಪುರೋಭಿವೃದ್ಧಿಗಾಗಿ ಯತ್ನಿಸಿರುವೆನೋ ಅಂತಹರಿಗೆ ಅದು ಹಾನಿಕರವಾಗಬಹುದು. ಅವರ ಭಾವೀ ಸುಖ, ಶಾಂತಿ, ಐಶ್ವರ್ಯಗಳು ಹೆಚ್ಚಬೇಕೆಂಬುದೇ ನನ್ನ ಮಹತ್ವದ ಆಶೆಯಾಗಿದೆ."

"ನಾನು ಈಗ ಅನುಸರಿಸಿರುವ ವಿಧಾನವು ಸಿಂಹಾಸನ, ಸಾಮ್ರಾಜ್ಯ, ಹಾಗೂ ಪ್ರಜೆಗಳ ದೃಷ್ಟಿಯಲ್ಲಿ ಶ್ರೇಷ್ಠವಾದುದೆಂದು ನಾನು ಭರವಸೆಪಡುತ್ತೇನೆ. ನಾನು ಸಿಂಹಾಸನಾರೂಢನಾಗುವ ಮೊದಲು ಮತ್ತು ಅನಂತರ ಅವರು ನನ್ನಲ್ಲಿ ತೋರಿಸಿರುವ ಪ್ರೇಮಾದರಗಳ ಅರಿವು ನನಗೆ ಪೂರ್ಣವಾಗಿರುವುದಲ್ಲದೆ ನನ್ನ ಬಳಿಕ ಸಿಂಹಾಸನವನ್ನಲಂಕರಿಸುವವರಿಗೆ ಕೂಡಾ ಅವರು ಅದೇ ಗೌರವಾದರಗಳನ್ನು ತೋರಿಸುವರೆಂಬ ನನ್ನ ಭರವಸೆಯಿದೆ."

"ನನ್ನೀ ತ್ಯಾಗಪತ್ರವು ಕಾರ್ಯರೂಪಕ್ಕೆ ಭಾಷಾಂತರಿಸಲ್ಪಡಲು ಯಾವ ವಿಳಂಬವೂ ಆಗಬಾರದಲ್ಲದೆ ಕೂಡಲೆ ನನ್ನ ಅನುಜ ಹಾಗೂ ಡ್ಯೂಕ್ ಆಫ್ ಯಾರ್ಕರು ಸಿಂಹಾಸನಾರೂಢರಾಗಬೇಕಾದುದು ಅತ್ಯವಶ್ಯವಾಗಿದೆ."

**"ಎಡ್ವರ್ಡ್ R. I"**

೦೦೦

ಸ್ಪೀಕರರು ಇದನ್ನು ಓದಿ ಮುಗಿಸಿದೊಡನೆಯೇ ಹೌಸ್ ಆಫ್

ಕಾಮನ್ಸಿನ
ಒಂದು ನಿ



ಎಂಟನೆಯ
ತ್ಯಾಗ

# …ರ ಸಂದೇಶ

# …ಲ್ಲದಿದ್ದರೆ ನನಗೆ …ಮು ಶಕ್ಯವಲ್ಲ!"

…ರಿಂಬುದನ್ನು ಮಾತ್ರ
ಮಹತ್ವದ ನಾಟಕದ
…ಡ್ಯೂಕ್ ಆಫ್ ವಿಂಡ್ಸ
…ವುದು. ಅಲ್ಲದೆ ಜನ
…ಪ್ರಸಾರೀ ರಾಜಕಾರಣಿ
…ಸಲಾಗುವುದು.



ಡ್ಯೂಕ್ ಆಫ್ ವಿಂಡ್ಸರರು ತನ್ನ ಪ್ರಿಯ ಪತ್ನಿಯಾದ ಡಚೆಸ್ ಆಫ್ ವಿಂಡ್ಸರರೊಡನೆ ವಿನೋದದಿಂದ ಕಾಲಗಳೆಯುತ್ತಿದ್ದಾರೆ.

**ಮಹತ್ವದ ರೇಡಿಯೋ ಭಾಷಣ.**

ಜಗತ್ತಿನಲ್ಲಿ ಹಿಂದೆಂದೂ ಅಷ್ಟು ರಾಷ್ಟ್ರಗಳು ವಿಶೇಷ ಕುತೂಹಲದಿಂದ ರೇಡಿಯೋ ಭಾಷಣವನ್ನು ಏಕಕಾಲದಲ್ಲಿ ಕೇಳಿದ್ದಿಲ್ಲ. ಎಂಟನೆಯ ಎಡ್ವರ್ಡರು ಸಿಂಹಾಸನತ್ಯಾಗ ಮಾಡಿದ ಬಳಿಕ ಕೊಟ್ಟ ಭಾಷಣವನ್ನು ಎಲ್ಲಾ ಖಂಡಗಳ ಜನರು ಕೇಳಿದರು. ಮಧ್ಯರಾತ್ರಿಯಲ್ಲಿ ಸ್ಮಶಾನದಲ್ಲಿದ್ದಂತೆ, ಆ ಕಾಲದಲ್ಲಿ ಎಡ್ವರ್ಡರೊಬ್ಬರೇ ತನ್ನ ಉದ್ವೇಗವನ್ನು ಸಹಿಸಿಕೊಳ್ಳಬೇಕಾಯಿತು. ಅವರ ೭೭ನೆಯ ಬ್ರಾಡ್‌ಕಾಸ್ಟ್ ಭಾಷಣದ ಸಾರಾಂಶವು ಹೀಗಿದೆ.—

ಕೆಲವು ತಾಸುಗಳ ಹಿಂದೆ ನನ್ನ ರಾಜತ್ವ ಹಾಗೂ ಚಕ್ರವರ್ತಿತ್ವವನ್ನು ಸಹೋದರ ಡ್ಯೂಕ್ ಆಫ್ ಯಾರ್ಕರಿಗೆ ಕೊಟ್ಟು, ನಾನೀಗ ಆ ಸಿಂಹಾಸನಕ್ಕೆ ವಿಧೇಯತೆಯನ್ನು ವ್ಯಕ್ತಪಡಿಸುತ್ತಿದ್ದೇನೆ.

ನಾನು ಯಾಕೆ ಸಿಂಹಾಸನ ತ್ಯಾಗ ಮಾಡಿದೆನೆಂದು ನಿಮಗೆಲ್ಲರಿಗೂ ತಿಳಿದಿರಬಹುದು. ಆದರೆ ನಾನು ೨೫ ವರುಷಗಳಿಂದ ಯಾವುದಕ್ಕಾಗಿ ದುಡಿದೆನೋ ಆ ಸಾಮ್ರಾಜ್ಯ, ಮತ್ತು ಪ್ರಜೆಗಳನ್ನು ಮರೆತಿಲ್ಲ.

ನಾನು ಪ್ರೀತಿಸುವ ಸ್ತ್ರೀಯ ಬೆಂಬಲವಿಲ್ಲದೆ ಹೊಣೆಗಾರಿಕೆಯನ್ನು ಹೊರುವ ಕೆಲಸವನ್ನು ನಾನು ಯಶಸ್ವಿಯಾಗಿ ಪೂರೈಸಲಾರನೆಂಬುದನ್ನು ನೀವು ನಂಬಬೇಕಾಗಿದೆ.

ನಾನು ಮಾಡಿರುವ ನಿರ್ಣಯವು ನನ್ನ ಸ್ವಂತ ಇಚ್ಛೆಯಿಂದಾಗಿರುವುದಲ್ಲದೆ ಇತರರ ಸೂಚನೆಗಳಿಗನುಸಾರವಾಗಿ ನಡೆದಿರುವುದಿಲ್ಲ. ಎಲ್ಲರ ಹಿತಕ್ಕಾಗಿ ನಾನೀ ಧೋರಣೆಯನ್ನು ಅನುಸರಿಸಿರುವುದಾಗಿದೆ.

ನನ್ನ ಸಹೋದರರು ತರಬೇತು ಹೊಂದಿದವರಾದುದರಿಂದ ಈ ಕೆಲಸವನ್ನು ಸಾಂಗವಾಗಿ ನೆರವೇರಿಸಬಲ್ಲರು. ಮಡದಿ ಮಕ್ಕಳೊಡಗೂಡಿಕೊಂಡು ಸುಖವಾದ ಗೃಹಜೀವನವನ್ನನುಭವಿಸುತ್ತಿರುವ ಅವರಿಗೆ ಈ ಕೆಲಸವು ಹೇಳಿಸಿದುದಾಗಿದೆ.

ನಾನು ಸಾರ್ವಜನಿಕ ಜೀವನದಿಂದ ದೂರವಾಗುತ್ತಿದ್ದೇನೆ. ಆದರೆ ಬ್ರಿಟಿಷ್ ಜನಾಂಗ ಮತ್ತು ಸಾಮ್ರಾಜ್ಯಕ್ಕಾಗಿ ನಾನು ತುಂಬಾ ಯತ್ನಿಸುವೆನಲ್ಲದೆ ಯಾವುದಾದರೊಂದು ಬಗೆಗಿ ಕೆಲಸವನ್ನು ಮಾಡಲು ಕೂಡಾ ನನ್ನ ಅಡ್ಡಿಯಿಲ್ಲ.

... ... ...

ಈ ಬ್ರಾಡ್‌ಕಾಸ್ಟ್ ಭಾಷಣವು ಬ್ರಿಟಿಷರಿಗೆ ಶುಷ್ಕವಾಗಿ ಕಂಡರೂ, ವಿವಿಧ ಆವೇಗಗಳನ್ನು ಅಣಕಿಸಬಲ್ಲ ಹೊಲಿವುಡ್ಡಿನ ನಟ ನಟಿಯರು ಕೂಡಾ ಇದನ್ನು ಕೇಳಿ ಕಣ್ಣೀರು ಸುರಿಸಿದರು.

**ಮೇರಿ ರಾಜ್ಞಿಯ ಬಿನ್ನಹ**

ಇದಾದೊಡನೆಯೇ ಎಡ್ವರ್ಡರ ಜನನಿ ಮೇರಿ ರಾಜ್ಞಿಯವರು ಸಾಮ್ರಾಜ್ಯದ ಪ್ರಜೆಗಳಿಗೊಂದು ಭಾಷಣ ಮಾಡಿ, ಎಡ್ವರ್ಡರ

(೨೬ನೆ ಪುಟ ನೋಡಿ)

# ವಿಚಿತ್ರ ವಾರ್ತೆಗಳು

### ನಳಿಗೆ ಮಕ್ಕಳ ತಂದೆತಾಯಿಗಳು!

ಅಮೇರಿಕದಲ್ಲಿ ಗಾಜಿನ ನಳಿಗೆಯ ಮಕ್ಕಳು ತಯಾರಿಸಲ್ಪಡುತ್ತಿವೆ. ಡಾ| ಗಯ್ ಆಲ್ಬರ್ಟ್ ಪೆಲ್ಸ್ಮನ್ ಎಂಬವರು ವೈದ್ಯಕೀಯ ಕಾಲೇಜಿನ ತರುಣ ತರುಣಿಯರ ವೀರ್ಯವನ್ನು ಬೆಲೆಗೆ ಕೊಂಡುಕೊಂಡು ಗಾಜಿನ ನಳಿಗೆಯ ಮಕ್ಕಳನ್ನು ಮಾಡುತ್ತಿದ್ದಾರೆ. ಇದು ಕಾಯಿದೆ ನಿಷಿದ್ಧವಾದುದರಿಂದ ವೀರ್ಯ ವಿಕ್ರಯಿಗಳೇ ತಂದೆ ತಾಯಿಯರೆಂದು ಹೇಳಬೇಕಾಗಿದೆ. ಇತ್ತೀಚೆಗೆ ಚಿಕಾಗೋವಿನ ಒಬ್ಬ ಸ್ತ್ರೀಗೆ ಇಬ್ಬರು ಮಕ್ಕಳು ಹುಟ್ಟಿದ್ದಾರೆ.

*

### ಪಾರದರ್ಶಕ ರಬ್ಬರ್!

ಟೆಡ್ಡಿಂಗ್ಟನಿನ ಸಂಶೋಧಕರಾದ ರಸಾಯನ ಶಾಸ್ತ್ರಜ್ಞರಿಬ್ಬರು ಪಾರದರ್ಶಕ ರಬ್ಬರನ್ನು ತಯಾರಿಸುವ ಸುಲಭ ವಿಧಾನವನ್ನು ಕಂಡುಹಿಡಿದಿದ್ದಾರೆ.

*

### ಕ್ರಿಮಿ ಸಂಹಾರಿ ಯಂತ್ರದ ಮಹತ್ಕಾರ್ಯ!

ಇಂಪೀರಿಯಲ್ ವಿಮಾನ ಸಂಸ್ಥೆಯವರು ವಿಮಾನದೊಳಗಿನ ಕ್ರಿಮಿಗಳನ್ನು ನಾಶಗೊಳಿಸುವುದಕ್ಕಾಗಿ ಒಂದು ವಿದ್ಯುತ್ಪೂರ್ಣ ಯಂತ್ರವನ್ನು ಕಂಡುಹಿಡಿದಿದ್ದಾರೆ. "ನೆಬ್ಯುಲಾಯ್ಸರ್" ಎಂಬ ಯಂತ್ರವು ವಿಮಾನದೊಳಗೆ ಕ್ರಿಮಿಗಳನ್ನು ಕೊಲ್ಲುವ ಒಂದು ದ್ರವ ಪದಾರ್ಥವನ್ನು ಚೆಲ್ಲಿದೊಡನೆಯೇ ಎಲ್ಲಾ ಕ್ರಿಮಿಗಳು ತಮ್ಮ ಕೊನೆಯಾವಸ್ಥೆಯನ್ನು ಹೊಂದುತ್ತವೆ.

*

### ಬಟಾಟೆಯ ಮಹತ್ವ

ಬೇಯಿಸಿದೊಡನೆ ಯಾವ ತರಕಾರಿಯಾದರೂ "ವಿಟಮಿನ್-ಸಿ" ಎಂಬ ಲೋಹ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ಆದರೆ ಬಟಾಟೆಯ ಲೋಹ ಶಕ್ತಿಯು ಮಾತ್ರ ನಾಶವಾಗುವುದಿಲ್ಲ. ಅದು ಕಾರಣ ಬಟಾಟೆಯಷ್ಟು ಹಿತಕರವಾದ ಆಹಾರವು ಮತ್ತೊಂದಿಲ್ಲ.

*

### ೪೦ ಸಾವಿರ ಚೀನೀ ತರುಣಿಯರು

ತಮ್ಮ ರಾಷ್ಟ್ರಕ್ಕಾಗಿ ಯುದ್ಧರಂಗದಲ್ಲಿ ಕೃತಕ ರೀತಿಯಿಂದ ಹೋರಾಡುತ್ತಿದ್ದಾರೆ. ಅಲ್ಲದೆ ಚೀನೀಯರಲ್ಲಿ ಪ್ರಚಾರ ಕಾರ್ಯವನ್ನು ನಡೆಸುವುದು ಇವರ ಮಹತ್ವದ ಕೆಲಸಗಳಲ್ಲೊಂದಾಗಿದೆ.

---

**ಮುಂದಿನವಾರ ಸ್ಪೈನ್ ಯುದ್ಧದ ಕುರಿತು ಬರೆದ ಸಚಿತ್ರ ಲೇಖನವು ಬರಲಿದೆ.**

---

(೨೭ನೇ ಪುಟದಿಂದ)

ತ್ತಿರುವ ಈ ಪಾಷಾಂಡಿಗಳು ಲೋಕವನ್ನು ಸದಾ ಬೆದರಿಸುತ್ತಿದ್ದು, ಜನರು ಭಯವಿಹ್ವಲರಾಗುವಂತೆ ಮಾಡುವರೆಂದು ತೋರುತ್ತಿದೆ. ಸರಿ, ಪ್ರಜಾಸತ್ತೆಯ ಪಾಠ ಹೇಳಿ ಅಮೇರಿಕದ ಮುಂದಿನ ಜನಾಂಗವನ್ನಾದರೂ ರಾಷ್ಟ್ರೀಯತೆಯ ಹುಚ್ಚಿನಿಂದ ದೂರಗೊಳಿಸಿರಿ.

ತಮ್ಮ
ಭಗದತ್ತ.

---

(೨೭ನೆ ಪುಟದಿಂದ)

ಆಳ್ವಿಕೆಯ ಗುಣ ಕಥನ ಹಾಗೂ ಅನಿರೀಕ್ಷಿತ ಘಟನೆಗಾಗಿ ಮರುಕವನ್ನು ವ್ಯಕ್ತಪಡಿಸಿ, ಎಂದಿನಂತೆಯೇ ಬೆಂಬಲವನ್ನೀಯಬೇಕೆಂದು ಬಿನ್ನವಿಸಿಕೊಂಡರು.

**ಮುಂದಿನ ವಾರ ಜಗತ್ತಿನ ಮಹಾ ನಾಟಕವಾದ ಈ ಸಿಂಹಾಸನ ತ್ಯಾಗದ ರಹಸ್ಯ, ಅದರ ನ್ಯಾಯಾನ್ಯಾಯ, ಎಡ್ವರ್ಡರ ಮುಂದಿನ ಚಟುವಟಿಕೆ, ವಿಂಡ್ಸರ್-ಸಿಂಪ್ಸನರ ಪಯಣ, ಇವೇ ಮೊದಲಾದ ಸ್ವಾರಸ್ಯಮಯ ವಿಚಾರಗಳು ಬರಲಿವೆ.**

# ಭಗದತ್ತನ ಬಹಿರಂಗ ಪತ್ರಗಳು.



**ಜಪಾನ್ ಕವಿ ಯೋನ್ ನೊಗುಚಿಯವರಿಗೆ,
ಸಕೂರಾಯಾವಾ, ನಕಾನೊ,
ಟೋಕಿಯೊ.**

---

ಸಾಮ್ರಾಜ್ಯಶಾಹಿಯ ಮರಿಯೇ.

ಕವಿ ರವೀಂದ್ರರಿಗೆ ನೀವು ಬರೆದ ಪತ್ರವನ್ನೋದಿ ಸಾಮ್ರಾಜ್ಯಶಾಹಿಯು ನಿಮ್ಮೊಡಲೊಳಗೆ ಪ್ರವೇಶಿಸಿತೆಂದು ಸ್ಪಷ್ಟವಾಯಿತು ನನಗೆ. "ಗಂಗೆ ಕರೆಯುತಿರುವಳೆನ್ನ" ಎಂಬ ಕವನವನ್ನು ಬರೆಯುವುದಕ್ಕಿಂತ 'ಸೈತಾನನೆನ್ನ ಕರೆಯುತಿಹನು' ಎಂಬ ಕವಿತೆಯನ್ನು ನೀವು ಬರೆಯಬಹುದಿತ್ತು. ಕವಿಯಾಗಿ ಹುಟ್ಟಿ ಕಣ್ಣಿನಲ್ಲಿ ರಕ್ತವಿರದ ಕ್ರೂರ ಸೈನ್ಯಾಧಿಕಾರಿಗಳಿಗೆ ನಿಮ್ಮೊಡಲನ್ನು ಮಾರಿಕೊಂಡಿರುವುದಕ್ಕಿಂತ ಹೆಚ್ಚಿನ 'ಸಮಾಧಿ'ಯು ಮತ್ತೊಂದಿಲ್ಲ. ಇತ್ತೀಚಿಗೆ ಪ್ರಸಿದ್ಧ ವಿಜ್ಞಾನಿ ಪ್ರೊ. ಈನ್‌ಸ್ಟನ್ ಹೇಳಿರುವಂತೆ 'ರಾಷ್ಟ್ರೀಯತೆಯು ಮಹಾವ್ಯಾಧಿಗಳಲ್ಲೊಂದಾಗಿದೆ'ಯೆಂಬ ಮಾತಿಗೆ ನಿಮಗೆ ತಾಗಿರುವ ವ್ಯಾಧಿಯೇ ದೊಡ್ಡ ಸಾಕ್ಷಿಯಾಗಿದೆ. ಜಪಾನು ಜಯಿಸುತ್ತಿದೆಯೆಂದು ನೀವಿಂತು ಹೇಳಿರಬಹುದು.

'ಜಪಾನ್ ಸೈನ್ಯಂ ಗೆಲ್ಗೆ'

ಇತಿ

**ಯೋನ್ ಭಗದತ್ತ**

---

**ಮದ್ರಾಸ್ ಮಂತ್ರಿಮಂಡಲದ 'ಗಾಡಿಯೆತ್ತು'ಗಳಿಗೆ, ಫೋರ್ಟ್ ಸೈಂಟ್ ಜಾರ್ಜ್. ಮದ್ರಾಸ್.**

---

ಪರಿತರುವಾಯ ರಾಜಾಜಿಯವರು ನಾಗಪಟ್ಟಣದಲ್ಲಿ ಮಂತ್ರಿಗಳನ್ನು ಗಾಡಿಯೆತ್ತುಗಳೆಂದು ಹೇಳಿರುವುದರಿಂದ ನನಗೇಕೋ ನಗೆ ಬಂದುಬಿಟ್ಟಿದೆ. ಆ ಪ್ರಧಾನ ಮಂತ್ರಿಯಾನೆ' ವೃಷಭೇಂದ್ರ'ರ ಉಪಮೆಗಳು ಸಾಮಾನ್ಯವಾದುವುಗಳಲ್ಲ.

ಅದಂತಿರಲಿ. ನಿಮ್ಮ ಗಾಡಿಯನ್ನು ಹೊಡೆಯುತ್ತಿರುವ ಗಾಡಿವಾಲಾ ಗವರ್ನರ್ ಸಾಹೇಬರಂದಂತೆ ನೀವು ಎಳೆದುಕೊಂಡು ಹೋಗುತ್ತಿರುವುದನ್ನು ನೋಡುವಾಗ ನವರಾಜ್ಯ ಘಟನೆಯನ್ನು ಮಣ್ಣುಪಾಲು ಮಾಡುವ ಬದಲು ನಮ್ಮ ನಿರ್ಣಯವನ್ನೇ ನುಚ್ಚುನೂರು ಮಾಡುವಂತೆ ಕಾಣುತ್ತಿದೆ.

ಪ್ರಾಂತಿಕ ಸ್ವಾಯತ್ತೆಯ ಭಾರ ಸಾಲದುದಕ್ಕೆ ನಿಮ್ಮ ಗಾಡಿಯಲ್ಲಿ ಆ ಬೀಜದ ಹೋರಿ ಪ್ರಿಯರಾದ ಲಿನ್ಲಿತ್ಗೋರವರು ಫೆಡರೇಶನೆಂಬ ಕಲ್ಲನ್ನು ಹೇರಿಸಲಿದ್ದಾರೆ.

ಸರಕಾರವೆಂಬ ಗಾಡಿಯೆಳೆಯುವ ಎತ್ತುಗಳೇ, ಸ್ವಾತಂತ್ರ್ಯವನ್ನು ಕೊಟ್ಟಿರುವೆವೆಂದು ಹೇಳಿ ಏಕಪ್ರಕಾರ ನಿಮ್ಮಿಂದ ಗಾಡಿಯೆಳೆಸಿ, ಫೆಡರಲ್ ಬಂಡೆಗಳನ್ನು ಹೊರಿಸಿ, ಬ್ರಿಟಿಷರು ತಮ್ಮ ಹಂಚಿಕೆಯ ಬೇಳೆಯನ್ನು ಬೇಯಿಸಿಬಿಡುವರೋ ಎಂಬ ಸಂಶಯದಲ್ಲಿರುವ

"ಭಗದತ್ತ"

---

**ಡಾ. ಬೆನೆಷರವರಿಗೆ**

---

ಮಹಾಶಯಾ,

ಜೆಕೋಸ್ಲೋವೇಕಿಯದ ರಾಜ್ಯಸೂತ್ರಗಳನ್ನು ನಡೆಸುತ್ತಿದ್ದ ನೀವು ಚಿಕಾಗೊ ವಿಶ್ವವಿದ್ಯಾಲಯದಲ್ಲಿ ಪ್ರಜಾಸತ್ತಾತ್ಮಕ ಸಂಸ್ಥೆಗಳ ಕುರಿತು ಭಾಷಣವೀಯುವ ಪ್ರೊಫೆಸರರಾಗುವಿರೆಂಬ ಸುದ್ದಿ ಕೇಳಿದ ಬಳಿಕ ಪ್ರಜಾಸತ್ತೆಯು ಭಾಷಣಗಳಲ್ಲಲ್ಲದೆ ಕಾರ್ಯರೂಪಕ್ಕೆ ತರಲ್ಪಡುವಂತಹದಲ್ಲವೆಂಬ ಅಭಿಪ್ರಾಯವು ನನ್ನಲ್ಲಿ ಬೇರೂರಿಬಿಟ್ಟಿದೆ ಇಂದಿನ ರಾಜಕಾರಣದ ರಂಗದಲ್ಲಿ ಕೊರಳು ಕೊಯ್ಕರು ತುಂಬಿಹೋಗಿದ್ದಾರೆ. ವಿವಿಧ ವೇಷಗಳನ್ನು ಧರಿಸಿ ಕುಣಿಯು

(೩೮ನೆ ಪುಟ ನೋಡಿರಿ)

ಅಂತರಂಗ ಸ್ಪರ್ಧೆಯ ಉತ್ತರಗಳನ್ನು ಬರೆದು ಕಳುಹಿಸುವ ಕೂಪನುಗಳು.




## ಅಂತರಂಗ ಸ್ಪರ್ಧೆ—ನಂ. ೧.

ಹೆಸರು . . . . . . . . . . . . .

. . . . . . . . . . . . .

. . . . . . . . . . . . .

ವಿಳಾಸ . . . . . . . . . . . .

. . . . . . . . . . . . .

. . . . . . . . . . . . .

ಸಹಿ. . . . . . . . . . . . .

ಉತ್ತರಗಳ ಸಂಖ್ಯೆ . . . . . . . .

ಕಳುಹಿಸಿದ ಹಣವೆಷ್ಟು . . . . . . .

**ವಿ. ಸೂ:** ಉತ್ತರಗಳನ್ನು ಬರೆಯುವಾಗ ಸ್ಪಷ್ಟವಾಗಿ ಬರೆಯಬೇಕು. ಪ್ರತಿಯೊಂದು ಉತ್ತರವೂ ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು.

# ಮನೋಭ್ರಾಂತಿ

ಲೇಖಕ: ವ್ಯಾಕರಣ ನರಸಿಂಹಮೂರ್ತಿ, ಬೆಂಗಳೂರು.

ಇಂದು ವಿಜಯ ದಶಮಿ. ನನ್ನ ರುಚಿರುಚಿಯಾಗಿ ಮಾಡಿಟ್ಟಿದ್ದ ಆಹಾರವನ್ನು ಆನಂದದಿಂದ ಭುಂಜಿಸಿ ಒಂದು ಆರಾಮು ಕುರ್ಚಿಯ ಮೇಲೆ ಅಂತರಂಗಕ್ಕೆ ಆನಂದವನ್ನೀಯುವ ಅಂತರಂಗವನ್ನು ಓದುತ್ತಾ ಮಲಗಿಕೊಂಡೆ. ಕೈಯಿಂದ ಪುಸ್ತಕವು ಜಾರಿತು. ಕಣ್ಣಿನ ರೆಪ್ಪೆಗಳೆಲ್ಲವೂ ಕೂಡಿದವು. ಕಂಡೆನೀ ಕೆಳಗಿನ ದೃಶ್ಯಗಳನು.

ನಾನು ನನ್ನ ನಲ್ಲೆ ಈವರೂ ರಾಯರ ಸೊಸೆಯಲ್ಲಿಗೆ ಹೋಗಿ ಹಿಂತಿರುಗುತ್ತಿರುವಾಗ, ನಲ್ಲೆಯು ನನ್ನ ಕೈತೋಳನ್ನು ತನ್ನ ಕೈತೋಳಿನಲ್ಲಿ ಬಂಧಿಸಿ "ಈಗ ಹೇಳಿ, ಹಣ ಹೆಚ್ಚೋ ಪ್ರೇಮ ಹೆಚ್ಚೋ" ಎಂದಳು. ನಾನು ಖೇದದಿಂದ "ಯಾಕೆ ರಾಜು? ನನ್ನೊಟ್ಟೆಯನ್ನೇಕೆ ಉರಿಸುವೇ, ನಮ್ಮ ತಂದೆಯನ್ನು ರಾಯರಿಗೆ ಹೋಲಿಸುವಿಯಾ, ಹಿಂದೂ ಸಮಾಜವನ್ನು ದೂರುವಿಯಾ ಬೇಡಾ—ಬೇಡ". "ಹಾಗಲ್ಲಂದ್ರೆ, ನಮ್ಮ ತಂದೆ ಕೊಡಬೇಕಾದ ಬಾಕೀಗೆ ಮಾವನವರೇಕೆ ತಗಾದೆ ಪಡಿಸುತ್ತಿರುವರು. ಪ್ರೇಮವೇ ಅತಿಶಯವಲ್ಲವೇ" ಈ ನುಡಿಯನ್ನು ಕೇಳಿ ವ್ಯಸನಗೊಂಡು ಅವಳನ್ನು ಸಮಾಧಾನ ಪಡಿಸಿ ಅವಳೊಡನೆ ಮನೆಯ ಕಡೆಗೆ ಬಂದುಬಿಟ್ಟೆನು.

ಮಾರನೆಯ ದಿನ ಮನೆಯಲ್ಲಿ ಯಾರೂ ಇಲ್ಲದೆ ಇರುವಾಗ ನನ್ನ ಪ್ರಿಯ ನಲ್ಲೆಯು ನನ್ನ ಬಳಿ ಬಂದು "ನನ್ನ ತಂದೆಯನ್ನು ಮನ್ನಿಸುವಿರಾ, ನಿಮ್ಮ ಪಾದ ಸೇವಕಳ ಕೊರಳಾಣೆಯನ್ನಿಡಿ" ಎಂದು ಹೇಳುತ್ತಿರುವಾಗ ನನಗೆ ಪುನಹ ಸಂಸಾರ ನೌಕದಲ್ಲಿ ಸುಂದರನ ಪ್ರಿಯತಮೆಯು ತನ್ನ ತಂದೆಯ ಬಳಿಯಲ್ಲಿ ಸ್ತ್ರೀ ಸಮಾಜದ ಕುಂದುಕೊರತೆಗಳನ್ನು ವಿವರಿಸಿದ್ದೂ—ರಾಯರ ಸೊಸೆಯಲ್ಲಿ—ರಾಯರ ಬಳಿಯಲ್ಲಿ ಡಾಕ್ಟರರ ಪ್ರಾರ್ಥನೆ, ಸೊಸೆ ಮತ್ತು ಬೀಗರ ಪ್ರಲಾಪ, ರಾಯರ ಕುಮಾರನ ಮತ್ತು ಮಿಸ್ಟರ್ ಅಂಡ್ ಮಿಸೆಸ್ ಡಾಕ್ಟರುಗಳ ಪ್ರಾರ್ಥನೆಗಳೆಲ್ಲವೂ ನನ್ನ ಮುಂದೆ ಹೊಳೆಯಲಾರಂಭಿಸಿತು. ಆ ಕ್ಷಣದಲ್ಲಿಯೇ ನಾನು ನನ್ನ ನಲ್ಲೆಯ ಗಲ್ಲವನ್ನು ಹಿಡಿದೆತ್ತಿ ಮತ್ತೊಂದು ಕೈಯಲ್ಲಿ ಅವಳ ತಲೆಯನ್ನು ಸವರುತ್ತಾ "ಇಲ್ಲ ರಾಜು! ಪ್ರೇಮದ ಮುಂದೆ ಇನ್ನೇನೂ ದೊರೆಯಲಾರದು. ಪ್ರೇಮವೇ ಧನ, ಬಂಧುಬಾಂಧವರನ್ನು ದೊರಕಿಸಿ ಕೊಡುವುದು. ಐಶ್ವಯ, ದರ್ಪ, ಅದೃಷ್ಟಾದಿಗಳು ಶಾಶ್ವತವಾದುವಲ್ಲ ಕೇಳು, Fortune is the strangest mistress ever a man wooed, who courts her she shuns, who deserves her she passes on, and who takes no pain to deserve her she lavishes with favour; that is the tragedy of humen soul ಆದ್ದರಿಂದ ಅದೃಷ್ಟಮಾತೆಯ ಕರುಣವು ನಮಗೆ ಲಭಿಸುವ ವರೆಗೂ ತಾಳ್ಮೆಯಿಂದಿರು" ಎಂದು ಅವಳನ್ನು ಸಮಾಧಾನಪಡಿಸಿ ಎಬ್ಬಿಸಿದೆನು.

ಅವಳಿನ್ನೇನು ಹೊರಡಬೇಕು. ಅಷ್ಟೊತ್ತಿಗೆ ನಮ್ಮ Messenger ವೆಂಕಟನು ಬಂದು ಒಂದು ಟೆಲಿಗ್ರಾಂ ತಂದುಕೊಟ್ಟನು. ಅದರಲ್ಲೇನೋ luckers information ಇದೆಯೇನೋ ಎಂದು ತಿಳಿದುಕೊಂಡು ಅದನ್ನು ಕೈಗೆ ತೆಗೆದುಕೊಂಡು ಅವನಿಗೆರಡಾಣೆಯನ್ನು ಕೊಟ್ಟು ಕಳುಹಿಸಿ, ಒಡೆದು ನೋಡಿದೆನು—"ಏನ್ರಿ ಅದು—ಹೇಳ್ರಿ, ಆರ್ಡರ್ ಬಂತೇನ್ರಿ—ಮಾತಾಡ್ರಿ" ಎಂದು ಮಧುರ ಮಾತುಗಳಿಂದ ಪ್ರಶ್ನಿಸುತ್ತಾ ನನ್ನನ್ನು ಸಮೀಪಿಸಿದಳು—ನನ್ನ ಕಣ್ಣಿನಿಂದ ಎರಡು ಹನಿ ನೀರು ಬಿತ್ತು. ಇದನ್ನು ನೋಡಿ ನಲ್ಲೆಯು ಬೆದರಿ—ನನ್ನ ಗಲ್ಲವನ್ನು ಹಿಡಿದೆತ್ತಿ "ಸಮಾಚಾರವೇನು-ಎಲ್ಲಿಂದ ಬಂದಿದೆ" ಎಂದಳು-"ರಾಜು, ಸರ್ವನಾಶ! ನಿಮ್ಮ ತಂದೆಯವರಿಗೆ Serious ಅಂತೆ. ನಿನ್ನನ್ನೀಗಲೆ ಕರೆದುಕೊಂಡು ಬರಬೇಕೆಂದು wire ಮಾಡಿರುವರು. ನಾನೀಗೇನು ಮಾಡಲಿ" ಎಂದು ಹೇಳಿ ಊರಿಗೆ ತಕ್ಷಣ ಹೊರಡಲು ನಿಶ್ಚಯಿಸಿದೆನು. ಬಂಧು ಬಾಂಧವರೆಲ್ಲರೂ ನನಗೆ ಹಣವನ್ನು ಕೊಡಲು ಹಿಂದೆಗೆದು ನನ್ನನ್ನು ಮತ್ತು ನನ್ನ ಮಾವನನ್ನು ಅತಿಯಾಗಿ ದೂಷಿಸಿದರು ಕಡೆಗೆ ನಾನು ನನ್ನ ಮಿತ್ರಳಾದ ರುಕ್ಮಿಣಿ (Melleswar-

am friend ಯ ಒಳಿಯಲ್ಲಿ ಐದು ರೂ. ಸಾಲವನ್ನು ತಂದು ಹೊರಡಲು ಅಣಿಯಾದೆನು.

ಸರಿ ರಾತ್ರೆ ೬-೩೦ ಗಂಟೆಗೆ ನಾನೂ ನನ್ನ ನಲ್ಲೆ-ಈರ್ವರೂ ಸದ್ದು ಮಾಡದೆ ರೈಲ್ವೇ ಸ್ಟೇಷನ್ ಕಡೆಗೆ ಒಂದು ಸೂಟ್‌ಕೇಸನ್ನು ಹಿಡಿದುಕೊಂಡು ಓಡಿದೆವು. ಬೆಳಗಿನ ಹೊತ್ತಿಗೆ ಬೆಂಗಳೂರಿಗೆ ಬಂದು ತಲ್ಪಿದೆವು. ಮನೆಯ ಒಳಿಯಲ್ಲಿ ಪೆಚ್ಚು ಮೋರೆಯ ವ್ಯಕ್ತಿಗಳನ್ನು ಕಂಡು ಏನೋ ಅವಿವೇಕ ನಡೆದಿದೆಯೆಂದು ತಿಳಿದು ನಲ್ಲೆಯ ಕೈಯನ್ನು ಹಿಡಿದು ಸರ್ರನೆ ಒಳಕ್ಕೆ ಹೋದೆನು. ನನ್ನನ್ನು ನೋಡುವುದು ಒಂದು ಅಪಮಾನಕರವೆಂದು ತಿಳಿದು ನನ್ನ ಪ್ರೇಮಪುತ್ಥಳಿಯ ಜನ್ಮದಾತನು ಇಹಲೋಕದಿಂದ ಪಾರಾಗಿದ್ದನು. ನಾವಿಬ್ಬರೂ ಕೂಡಲೆ ಪ್ರೇತದ ಮೇಲೆ ಬಿದ್ದು "ಅಯ್ಯೋ, ನಿಮಗೆ ಮೋಸಮಾಡಿ ನನ್ನ ತಂದೆಯ ಅನುಮತಿಯ ಮೇರೆಗೆ ಹಾಳಾದ ಸನ್ನೀ ದೇಹವನ್ನು ನಿಮ್ಮ ಮಗಳಿಗೆ ಮಾರಿದೆನು. ದಾಸತ್ವಕ್ಕೆ ಧಿಕ್ಕಾರ. ಕ್ಷಮಿಸಿ—ಇಗೋ ಸನ್ನೀ ದೇಹವನ್ನು ತೆಗೆದುಕೊಳ್ಳಿ" ಎಂದು ಗಟ್ಟಿಯಾಗಿ ಕಿರಿಚಿಕೊಂಡು ಕೈಕಾಲುಗಳನ್ನು ಝಾಡಿಸಿದೆನು. ಕೈಯು ನನ್ನ ಕೊಡೆಯ ಮೇಲೂ ಕಾಲು ನನ್ನ ಟೇಬಲ್ಲಿಗೂ ತಗುಲಿ ಧಢಾರನೆ ಶಬ್ದವಾಯಿತು. ನಾನು ತಕ್ಷಣ ಎಚ್ಚತ್ತು ಕಣ್ತೆರೆದು ನೋಡಲು—ನನ್ನ ನಲ್ಲೆ ನನ್ನ ಮಾವ—ನನ್ನ ಪ್ರೇಮ ಪುತ್ರ ಮೂವರೂ ನನ್ನೆದುರಿಗೆ ವೀಳ್ಯವನ್ನು ಸವಿಯುತ್ತಾ, ನಿಂತಿದ್ದರು. ನನಗೆ ಆಗ "ನಾನೆಲ್ಲಿದ್ದೇನೆ" ಎಂಬ ವಿಚಾರವು ತಿಳಿಯದೇ ಇದ್ದಾಗ ಅಂತರಂಗವನ್ನು ನೋಡಿದೆ. "ಅಯ್ಯೋ, ಭ್ರಾಂತೀನೇ! ನನ್ನನ್ನೂ ಕೂಡ ಬ್ರಾಂತಿ ವಿಲಾಸ ನಾಟಕ ಸಭೆಯ ನಟನನ್ನಾಗಿ ಆರಿಸಿಕೊಂಡೆಯ" ಎಂದುಕೊಂಡು ಅವರಿಗೆ ಸ್ವಪ್ನ ವೃತ್ತಾಂತವನ್ನು ತಿಳಿಸಿದೆನು. ಇದನ್ನು ಕೇಳಿ ಅವರೆಲ್ಲರೂ ಗೊಳ್ಳನೆ ನಕ್ಕರು. "ಇದೆಲ್ಲಾ ತಿಂಡಿಯ ಗುಣಪ್ಪ" ಅಂದರು ಮಾವನವರು. "ಇಲ್ಲ—ಇಲ್ಲ. ಇವರಿಗೆ ವರದಕ್ಷಿಣೆ ಬೇಕಂತೆ, ಕೊಡೀಪ್ಪಾ" ಅಂದಳು ನನ್ನ ಪಟ್ಟೊಂಡವಳು. 'ಇಲ್ಲ ಇಲ್ಲಾ ಕಾಕಾ, ಅಪ್ಪನ ಸ್ವಪ್ನದಲ್ಲಿ ಸತ್ತಂತೆ ಕಾಕನಿಗೆ ಆಯುಷ್ಯ ಹೆಚ್ಚಮ್ಮ" ಅಂದ ಗೋಪಿ.

ನೋಡಿದಿರಾ, ಮನೋಭ್ರಾಂತಿಯ ಭಾವನೆಯೇ ಒಂದು ಸಂಸಾರ ನೋಟವನ್ನು ತೋರಬಲ್ಲದು. ದೇವದೇವನ ಹಿಡಿತಕ್ಕೆ ಸೇರುವ ಈ ಜಗತ್ಸಂಸಾರವೇ ಒಂದು ನಾಟಕ ದೃಶ್ಯ. ಇದನ್ನರಿತವನೇ ಈ ಸಂಸಾರದಿಂದ ಬಿಡುಗಡೆ ಹೊಂದಲ್ಪಡುವನು.

---



---

## ನಾಝೋ ವಂದಸ!

ರಸ್ತೆಯ ಬದಿಯಲ್ಲಿನಿಂತು "ಬಸ್ ಬರುವಾಗ ಕೈಯ್ಯನ್ನು ಉದ್ದಕ್ಕೆ ನೀಡಿ ತೋರಿಸಿದ. ಬಸ್ಸಿನಲ್ಲಿ ಜನತುಂಬಾ ಇದ್ದುದರಿಂದ ಬಸ್ಸು ಹೋಗಿಬಿಟ್ಟಿತು. ರಾಮ ವಾಪಾಸು ಬಂದಾಗ ಗೋವಿಂದ ಹೇಳಿದ:

"ನೀನು ಕೈ ತೋರಿಸಿದ್ದು ವ್ಯರ್ಥವಾಯಿತಲ್ಲ

"ವ್ಯರ್ಥವಾಗಲಿಲ್ಲ' ಇದಿರಿನ ಸೀಟನಲ್ಲಿಯೇ ಜರ್ಮನ್ ಧೊರೆಯೊಬ್ಬರಿದ್ದರು. ಅವರದನ್ನು ನಾಝೊ ಸೆಲ್ಯೂಟೆಂದು ಸ್ವೀಕರಿಸಿದರು.

# ಫೆಡರೇಶನಿನ ಚಕ್ರವ್ಯೂಹದಲ್ಲಿ

ಆರೋಗ್ಯದ ಸುಧಾರಣೆಗಾಗಿ ಬ್ರಿಟಿಷ್ ಪ್ರಭುತ್ವದ ಕಿರೀಟವಾದ ವೈಟ್‌ಹಾಲಿಗೆ ತೆರಳಿ ಲಾರ್ಡ್ ಜೆಟ್ಲೆಂಡರೊಡನೆ ಬ್ರಿಟಿಷ್ ಕುಯುಕ್ತಿಯ ಫೆಡರಲ್ ರಥವನ್ನು ವಿರೋಧದಿಂದ ತುಂಬಿರುವ ಭಾರತದಲ್ಲಿ ಹೇಗೆ ನಡೆಸುವುದೆಂಬುದನ್ನು ಚರ್ಚಿಸಿ, ಬ್ರಿಟಿಷ್ ಮುತ್ಸದ್ದಿಗಳ ದರ್ಶನ ಲಾಭದಿಂದ ಹೇಗಾದರೂ ಆರೋಗ್ಯಲಾಭವನ್ನು ಹೊಂದಿ ಭಾರತದ ವೈಸರಾಯರಾದ ಲಾರ್ಡ್ ಲಿನ್ಲಿತ್ಗೋರವರು ಸಪತ್ನೀಕರಾಗಿ ದೆಹಲಿಯನ್ನು ಸೇರಿಯಾಯಿತು.



ಮಹತ್ವದ ತಪಸ್ಸಿನಲ್ಲಿ ಲೀನನಾಗಿರುವ ಋಷಿಯು ಒನಪು ವೈಯ್ಯಾರಗಳಿಂದ ಮನಮೋಹಿಸುತ್ತಿರುವ ಸುಂದರಿಯನ್ನು ನೋಡೆನೆಂದು ಹೇಳುವಂತೆ, ಭಾರತದ ಉಪಸಚಿವರಾದ ಮ್ಯೂರ್ ಹೆಡ್‌ರವರು "ಫೆಡರೇಶನಿನ ಕುರಿತು ನಾನು ಮಾತಾಡಬಂದಿರುವವನಲ್ಲ, ಈ ದೇಶದ ಸೌಂದರ್ಯವನ್ನು ಕಂಡು ಮನತಣಿಸಲಿಕ್ಕಾಗಿ ಮಾತ್ರ ಸಂಚರಿಸುತ್ತಿದ್ದೇನೆ" ಎಂದು ಹೇಳಿದರೂ ಈಗಾಗಲೆ ಹಲವು ಕಾಂಗ್ರೆಸ್ ಮಂತ್ರಿಗಳೊಡನೆ ಫೆಡರೇಶನಿನ ಕುರಿತು ಚರ್ಚಿಸಿ ಗಾಂಧಿಜಿಯವರನ್ನು ಕಂಡು ಮಾತಾಡಿದರು. ಬ್ರಿಟಿಷರ ಭರವಸೆಗೂ, ಹಿಟ್ಲರನ ಆಶ್ವಾಸನೆಗೂ ಇರುವ ಏಕಮಾತ್ರ ವ್ಯತ್ಯಾಸವೆಂದರೆ ಅವರಾಡುವ ಮಾತು ಇಂಗ್ಲಿಷ್; ಹಿಟ್ಲರನದು ಜರ್ಮನ್ ಇಷ್ಟೆ.



೧೯೩೯ನೆ ಇಸವಿಯು ಗತಿಸಿದ ವರುಷಗಳೊಡನೆ ಸೇರಿಕೊಳ್ಳುವ ಮೊದಲೇ ಬ್ರಿಟಿಷ್ ರಾಜಕಾರಣಿಗಳು ಎಲ್ಲಾ ನರೇಂದ್ರರನ್ನು ಸ್ವತಃ ಕಂಡು ಮಾತಾಡುವರೆಂಬುದು ಖಂಡಿತ. ಲೆಫ್ಟಿನೆಂಟ್ ಕರ್ನಲ್ ಮ್ಯೂರ್ ಹೆಡ್‌ರವರು ಎಲ್ಲರೊಡನೆಯೂ ಅಭಿಪ್ರಾಯ ವಿನಿಮಯ ಮಾಡಿಕೊಂಡ ಬಳಿಕ ಬ್ರಿಟಿಷ್ ಮಂತ್ರಿಮಂಡಲಕ್ಕೆ ತನ್ನ ಸಂಚಾರದ ವರದಿಯೊಂದನ್ನು ಕಳುಹಿಸಲಿದ್ದಾರೆ. ಈ ವರದಿಯ ಆಧಾರದ ಮೇಲೆ ಲಂಡನಿಗೂ ದೆಹಲಿಗೂ ಪತ್ರವ್ಯವಹಾರವು ನಡೆಯಲಿದೆ.



ಈಗಾಗಲೆ "Instrument of Accession" ಎಂಬುದರ ತಿದ್ದಿದ ಪ್ರತಿಗಳು ಭಾರತೀಯ ಸಂಸ್ಥಾನಗಳ ದಿವಾನರಿಗೆ ಕಳುಹಿಸಲ್ಪಟ್ಟಿರುವುವಲ್ಲದೆ ಅದರ ಕುರಿತು ಆರು ತಿಂಗಳುಗಳೊಳಗೆ ಪ್ರತಿಯೊಬ್ಬನೂ ತಮ್ಮ ಅಭಿಪ್ರಾಯವನ್ನು ಕೊಡಬೇಕೆಂಬ 'ಫರ್ಮಾನು' ದೆಹಲಿಯಿಂದ ಹೊರಟಿದೆ.



ಮೊನ್ನೆ ದೆಹಲಿಯಲ್ಲಿ ರಾಜಕಾರಣ ಇಲಾಖೆಗೂ, ಸಂಸ್ಥಾನಗಳ ದಿವಾನರಿಗೂ ನಡೆದ ಮಾತುಕತೆಯಲ್ಲಿ ಫೆಡರಲ್ ಚಕ್ರವ್ಯೂಹದೊಳಗೆ ಸಂಸ್ಥಾನದ ತುಂಡರಸರು ಪ್ರವೇಶಿಸಲು ಒಪ್ಪಿದಂತೆಯೇ ಎಂದು ಹೇಳಬಹುದಾಗಿದೆ. ದಿವಾನರು ಬ್ರಿಟಿಷರ ಸೂಚನೆಗಳನ್ನು ಎದುರಿಸುವ ಬದಲು ಎಂದಿಗಿಂತಲೂ ಹೆಚ್ಚು ಉತ್ಸಾಹದಿಂದ ಕುಣಿದು ತಮ್ಮ ಬೆಂಬಲದ ಆಶ್ವಾಸನೆಗಳನ್ನು ಕೊಟ್ಟಿದ್ದಾರೆ.



ಫೆಡರೇಶನ್ ಆದಷ್ಟು ಬೇಗನೆ ಜಾರಿಗೆ ಬರುವುದೊಳ್ಳಿತೆಂದು ಅನೇಕ ಸಂಸ್ಥಾನಗಳು ಈಗಾಗಲೆ ತಮ್ಮ ಸ್ವಭಾವಜನ್ಯ ಆಶೆಯನ್ನು ಪ್ರಕಟಿಸಿವೆ. ಸಂಸ್ಥಾನಗಳ ಏಕಮಾತ್ರ ಆಶೆಯೆಂದರೆ ಪ್ರಭುತ್ವದವರಿಗೂ ಅವರ ಛತ್ರದಡಿಯಲ್ಲಿ 'ನರೇಂದ್ರ'ರೆಂಬ ಬಿರುದನ್ನು ಹೊತ್ತುಕೊಂಡು ನಾಮಮಾತ್ರ ರಾಜ್ಯಭಾರ ನಡೆಸುತ್ತಿರುವ ರಾಜರಿಗೂ ಈ ಮೊದಲೇ ಆದ ಒಪ್ಪಂದದ ಶರ್ತಗಳಲ್ಲಿ ಫೆಡರಲ್ ವಿಧಾಯಕ ಸಭೆಯು ಯಾವ ವ್ಯತ್ಯಾಸಗಳನ್ನೂ ಮಾಡಲಿಕ್ಕಿಲ್ಲವೆಂಬ ಆಶ್ವಾಸನೆಯಾಗಿದೆ. ಒಪ್ಪಂದಕ್ಕನುಸಾರವಾಗಿ ಮುಂದೆ ಸಂಯುಕ್ತ ಭಾರತವು ಸಂಸ್ಥಾನಗಳ 'ಪ್ರಭುತ್ವ'ವನ್ನು ಯಾವ ರೀತಿಯಲ್ಲಿಯೂ ಉಪದ್ರವಿಸುವಂತಿರಲಾರದೆಂಬುದು ಸಂಸ್ಥಾನಗಳ ಎರಡನೆಯ ನಂಬಿಕೆ. ಮೂರನೆಯದಾಗಿ ಭಾರತವನ್ನು ಸಂಯುಕ್ತಗೊಳಿಸುವದರಲ್ಲಿ ಈಗಿರುವ ದೊಡ್ಡ ಸಂಸ್ಥಾನಗಳೇ ಪ್ರಾಮುಖ್ಯವಾದವುಗಳೆಂಬುದನ್ನು ಬ್ರಿಟಿಷ್ ಪ್ರಭುತ್ವವು ಒಪ್ಪಿಕೊಳ್ಳಬೇಕಾಗುವುದು.



ದೊಡ್ಡ ಸಂಸ್ಥಾನಗಳ ಮೂರನೆಯ ಶರ್ತವನ್ನು ಒಪ್ಪಿಕೊಂಡರೆ ಬ್ರಿಟಿಷ್ ಪ್ರಭುತ್ವದವರು ಸಂಸ್ಥಾನಗಳಿಗೆ ಹಲಕೆಲವು ಸವಲತ್ತುಗಳನ್ನು ಕೊಡಬೇಕೆಂಬ ಪ್ರಶ್ನೆಯು ಬಂದಿದೆ. ಉದಾಹರಣೆಗಾಗಿ ಬೆಂಗಳೂರಿನ ಕೆಂಟೋನ್‌ಮೆಂಟನ್ನು ಪ್ರಭುತ್ವಕ್ಕೆ ಪೂರ್ಣವಾಗಿ ಬಿಟ್ಟು ಕೊಡುವುದು-ಅಥವಾ ಪೊಗದಿಯಲ್ಲಿ ಸ್ವಲ್ಪ ಕಡಿಮೆ ಮಾಡುವುದು. ಈ ಕುರಿತು ಚರ್ಚೆಯು ಇನ್ನೂ ನಡೆಯಲಿದೆ. ಲಾರ್ಡ್ ಲಿನ್ಲಿತ್ಗೋರವರು ಬೆಂಗಳೂರಿಗೆ ಹೋಗುವ ರಹಸ್ಯವೂ ಇದೇ ಆಗಿದೆ. ಈಗಿನ ಮನೋಗತಿಯು ಮುಂದರಿದರೆ ಸಂಸ್ಥಾನಗಳು ಬ್ರಿಟನಿನ ಫೆಡರಲ್ ಯೋಜನೆಗೆ ವಿರೋಧಿಸಲಾರವೆಂಬುದು ಖಂಡಿತವಾಗಿದೆ.



ಇನ್ನು ಬ್ರಿಟಿಷ್ ಮುತ್ಸದ್ದಿಗಳನ್ನು ಬಹಳವಾಗಿ ಉಪದ್ರವಿಸುವವರೆಂದರೆ ಬ್ರಿಟಿಷ್ ಇಂಡಿಯದ ಪ್ರಾಂತ್ಯಗಳ-ವಿಶೇಷವಾಗಿ ಕಾಂಗ್ರೆಸ್ ಪ್ರಾಂತ್ಯಗಳು. ಸುಭಾಷ ಬೋಸರು ಇತ್ತೀಚೆಗೆ ಪತ್ರಿಕೋದ್ಯಮಿಗಳೊಡನೆ ಫೆಡರೇಶನಿನ ಕುರಿತು ಚರ್ಚಿಸುವುದಕ್ಕಾಗಿ ಒಂದು "ರೌಂಡ್ ಟೇಬ್ಲ್ ಕಾನ್ಫರೆನ್ಸ್" ನಡೆಸುವುದುತ್ತಮವೆಂದು ಹೇಳಿದ್ದಾರೆ. ಬ್ರಿಟಿಷ್ ಫೆಡರಲ್ ಧೋರಣೆಯ ಕಡುವೈರಿ ಸುಭಾಷರು ಹೀಗಂದಿರುವುದನ್ನು ನೋಡುವಾಗ ಕಾಂಗ್ರೆಸಿನ 'ಮಹಾಕೂಟ'ದಲ್ಲಿ ಈ ಕುರಿತು ಏನೋ ಹಂಚಿಕೆಗಳಾಗಿರಬೇಕೆಂದು ಸ್ಪಷ್ಟವಾಗುತ್ತದೆ. ಫೆಡರೇಶನನ್ನು ವಿರೋಧಿಸಬೇಕೆಂದು ಠರಾವಾಗಿರುವುದಿದ್ದರೂ, ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿದರೆ ಫೆಡರೇಶನನ್ನು ಕಾಂಗ್ರೆಸ್ ಕೂಡಾ ಸ್ವೀಕರಿಸಿ, ೧೯೪೦ರಲ್ಲಿ ಫೆಡರಲ್ ರಥವು ಭಾರತದ ಬಯಲು ಭೂಮಿಯಲ್ಲಿ ಓಡತೊಡಗಬಹುದೆಂದು ನಿಸ್ಸಂಶಯವಾಗಿ ಹೇಳಬಹುದಾಗಿದೆ.

"ಅಭಿಮನ್ಯು"

---

**ಹೋಟೆಲಿನಲ್ಲಿ:—**

**ಗಿರಾಕಿ:-** ಇಲ್ಲಿ ನಾಯಿಗೂ ಅನ್ನ ಹಾಕುತ್ತೀರಲ್ಲ?

**ಹುಡುಗ:-** ನಾವು ಎಂಥವರಿಗೂ ಅನ್ನ ಹಾಕುತ್ತೇವೆ.

---



# "ವೀರನಾರಿ"

• •

**ವೀರಮತಿಯು ವೀರಪಿತನ ವೀರಪುತ್ರಿ. ಕರ್ತವ್ಯಪಾಲನೆಗಾಗಿ ಸೊಂಟದಲ್ಲಿ ಅಲೆದಾಡುತ್ತಿದ್ದ ಖಡ್ಗವನ್ನು ತೆಗೆದು ಕೃಷ್ಣರಾಯನ ಹೃದಯಕ್ಕೆ ಚುಚ್ಚಿದಳು. ಸಳ್ಳನೆ ರಕ್ತ ಸಿಂಚಿತವಾಯಿತು. ದೇಶದ್ರೋಹಿಯ ಕೊಲೆಮಾಡಿ, ಅವನನ್ನು ಅಧರ್ಮದಿಂದ ರಕ್ಷಿಸಿ, ದೇವಗಿರಿಯ ಭಾಗ್ಯಚಂದ್ರಿಕೆಯಾದಳಾಕೆ.**



(ಒಂದು ಹಿಂದೀ ಕಥೆಯ ಆಧಾರದಿಂದ)

ಬರೆದವರು: ಶ್ರೀ. ಮಂಜುನಾಥ ಕುಮಟಾಕರ

ಹದಿನಾಲ್ಕನೇ ಶತಮಾನದ ಪೂರ್ವಾರ್ಧವು. ದಿಲ್ಲಿಯ ಮುಸಲ್ಮಾನ ಬಾದಶಹನಾದ ಅಲ್ಲಾವುದ್ದೀನನ ಕೈಹಿಡಿದಿತ್ತು. ಪ್ರಜೆಗಳಲ್ಲಿ ಸುಖಸಂತೋಷಗಳಿರಲಿಲ್ಲ. ಆಳಗಳಿಂದ ಸರದಾರ ಸಚಿವರ ವರೆಗೆ ಯಾರಿಗೂ ಸ್ವೇಚ್ಛೆಯಿಂದ ನಡೆಯಲು ಬರುತ್ತಿರಲಿಲ್ಲ. ಪ್ರಜೆಗಳೆಲ್ಲರ ವ್ಯಕ್ತಿ ಸ್ವಾತಂತ್ರ್ಯವು ಭಸ್ಮೀಭೂತವಾಗಿ ಹೋಗಿದ್ದಿತು. ಅಲ್ಲಾವುದ್ದೀನನು ಮಹತ್ವಾಕಾಂಕ್ಷಿಯಾದ ಅರಸನಾಗಿದ್ದನು. ಈಗಾಗಲೇ ಆತನು ಇಡೀ ಉತ್ತರ ಹಿಂದುಸ್ಥಾನವನ್ನು ಜಯಿಸಿದ್ದನು. ದಕ್ಷಿಣ ಹಿಂದುಸ್ಥಾನವೊಂದನ್ನು ಜಯಿಸಬೇಕೆಂದು ಆತನು ಬಹಳ ಹೆಣಗಾಡುತ್ತಿದ್ದನು.

ಆ ಕಾಲಕ್ಕೆ ದಕ್ಷಿಣ ಹಿಂದುಸ್ಥಾನದಲ್ಲಿ ದೇವಗಿರಿಯು ಧನಸಂಪನ್ನ ಪಟ್ಟಣಗಳಲ್ಲೊಂದಾಗಿತ್ತು. ಅಲ್ಲಿಯ ಅರಸನಾದ ರಾಮದೇವ ರಾಜನು ಸ್ವಾತಂತ್ರ್ಯ ಪ್ರೇಮಿಗಳಲ್ಲಿ ಅಗ್ರೇಸರನಾಗಿದ್ದನು. ಅಲ್ಲಿಯ ಪ್ರಜೆಗಳು ಸಹ ಸ್ವಾತಂತ್ರ್ಯ ದೇವಿಯ ನಿಸ್ಸೀಮ ಭಕ್ತರಾಗಿದ್ದರು. ಅವರು ಮಾತೃಭೂಮಿಯ ಸಲುವಾಗಿ ತಮ್ಮ ಪ್ರಾಣಗಳನ್ನು ಕೊಡಲಿಕ್ಕೆ ಕೂಡಾ ಹಿಂದುಮುಂದು ನೋಡುತ್ತಿರಲಿಲ್ಲ. ಇಂತಹ ಸಿಂಹಗಳ ರಾಷ್ಟ್ರವನ್ನು ಅಲ್ಲಾಉದ್ದೀನನು ಜಯಿಸುವದೆಂತು? ಆತನು ದೇವಗಿರಿಯನ್ನು ಬಹಳ ಸಾರಿ ಮುತ್ತಿದನು. ಆದರೆ ರಾಮದೇವ ರಾಜನ ವೀರಮಂತ್ರಿಯ ಉಜ್ವಲ ಪರಾಕ್ರಮದಿಂದ ಆತನು ಪ್ರತಿಯೊಂದು ಸಲ ಪರಾಜಿತನಾದನು.

ರಾಮದೇವ ರಾಜನ ಮಂತ್ರಿಗೆ ವೀರಮತಿ ಎಂಬವಳೋರ್ವ ವೀರಪುತ್ರಿ ಇದ್ದಳು. ವೀರಮತಿಯು ಸ್ವಭಾವ ಸುಂದರಿಯಾಗಿದ್ದಳು. ಇಂದಿನ ಬಣ್ಣದ ಬೆಡಗು ಆಕೆಗೆ ಗೊತ್ತಿರಲಿಲ್ಲ. ನೈಸರ್ಗಿಕವಾದ ರೂಪ, ಆ ರೂಪಕ್ಕೆ ತಕ್ಕ ಗುಣ ಇವುಗಳಿಂದ ಆಕೆಯು ಎಲ್ಲರಿಗೂ ಬೇಕಾದವಳಾಗಿದ್ದಳು. ಆಕೆಯ ತಂದೆಯಂತೂ ಅವಳ ಮೇಲೆ ಬಹಳ ಮಮತೆ ಮಾಡುತ್ತಿದ್ದನು. ಅವಳ ತಂದೆಯು ಬದುಕಿ ಇರುವ ವರೆಗೆ ಅಲ್ಲಾಉದ್ದೀನನಿಗೆ ಜಯವು ಸ್ವಪ್ನದಲ್ಲಿ ಸಹ ಸಿಗಲಿಲ್ಲ. ಆದರೆ ದುರ್ದೈವಿಯಾದ ದೇವಗಿರಿ ರಾಜ್ಯಲಕ್ಷ್ಮಿಯ

ಯು ತುಸು ದಿನಗಳಲ್ಲಿಯೇ ತನ್ನ ವೀರ ಮಂತ್ರಿಯನ್ನು ಕಳಕೊಂಡಳು. ಪಿತೃವಿಹೀನಳಾದ ವೀರಮತಿಯನ್ನು ರಾಜನು ಅರಮನೆಯಲ್ಲಿ ತನ್ನ ಪುತ್ರಿಯೊಂದಿಗಿರಿಸಿ ಹೊಟ್ಟೆಯ ಮಗಳಂತೆ ನೋಡಿಕೊಳ್ಳುತ್ತಿದ್ದನು. ವೀರಮತಿಗಷ್ಟೇ ಅಲ್ಲ, ಪ್ರತಿಯೊಬ್ಬನಿಗೂ ಆತನು ಹಾಗೆಯೇ ನೋಡುತ್ತಿದ್ದನು. ಆತನಿಗಾಗಿ ದೇವಗಿರಿಯ ಪ್ರಜೆಗಳು ಬೇಕಾದಂತಹ ಕಷ್ಟಗಳನ್ನು ಸಹಿಸುತ್ತಿದ್ದರು. ರಾಜ್ಯವೆಂದರೆ ತನ್ನ ಉಪಭೋಗ ವಸ್ತುವೆಂದು ಆತನು ತಿಳಿದಿರಲಿಲ್ಲ. ಈ "ರಾಜ್ಯವೆಂದರೆ ಪ್ರಜೆಗಳು ತನ್ನ ಹತ್ತರ ಇಟ್ಟ ಸ್ವಾತಂತ್ರ್ಯದ ಠೇವಾಗಿದೆ. ನಾನೊಬ್ಬ ಪ್ರಜೆಗಳ ಸೇವಕ" ಹೀಗೆ ಆತನು ತಿಳಿದಿದ್ದನು.

ತುಸು ದಿನಗಳಲ್ಲಿ ರಾಮದೇವ ರಾಜನು ವೀರಮತಿಯ ಹಾಗೂ ತನ್ನ ಪುತ್ರಿ ಗೌರೀದೇವಿಯ ವಿವಾಹವನ್ನು ವಿಜೃಂಭಣೆಯಿಂದ ನೆರವೇರಿಸಿದನು. ಕೃಷ್ಣರಾಯನೆಂಬ ಒಬ್ಬ ಮರಾಠಾ ಯುವಕನು ವೀರಮತಿಯ ಪತಿಯಾಗಿದ್ದನು. ಆತನು ಮಹಾವೀರನೂ, ತರುಣನೂ, ಸುಂದರನೂ ಆಗಿದ್ದನು. ನಚ್ಚಿನ ಪತಿಯು ದೊರಕಿದುದಕ್ಕಾಗಿ ವೀರಮತಿಗೆ ಬಹಳ ಆನಂದವಾಗಿದ್ದಿತು.

ಮಾಸವೆರಡು ಕ್ರಮಿಸಿತು. ಅಲ್ಲಾಉದ್ದೀನನು ಪುನಃ ದೇವಗಿರಿಯ ಮೇಲೆ ದಂಡೆತ್ತಿ ಬಂದನು. ಈಗ ದೇವಗಿರಿಯ ವೀರಮಂತ್ರಿಯು ಇರಲಿಲ್ಲ. ಆದರೂ ಅಲ್ಲಿಯ ಜನರು ಜೀವದ ಹಂಗುದೊರೆದು ಕಾದಿದರು. ಒಂದೇ ಸವನೆ ಬಹಳ ದಿವಸಗಳ ವರೆಗೆ ಯುದ್ಧವು ನಡೆಯಿತು. ಜಯಶ್ರೀಯು ಯಾರ ಕೊರಳಿಗೂ ಮಾಲೆಹಾಕಲಿಲ್ಲ. ಮುಂದೆ ಅಲ್ಲಾಉದ್ದೀನನು ಕೃಷ್ಣರಾಯನಿಗೆ ಪದವಿಯ ಆಶೆ ಹಚ್ಚಿ ಆತನನ್ನು ತನ್ನ ಕಡೆಗೆ ಸೆಳಕೊಂಡನು. ಯುದ್ಧವು ನಿಂತಿತು. ದೇವಗಿರಿಯ ಪ್ರಜೆಗಳು ಆನಂದಿತರಾದರು. ಅಲ್ಲಾಉದ್ದೀನನ ಕೃಷ್ಣಕಾರಸ್ಥಾನವು ಯಾರಿಗೂ ತಿಳಿಯಲಿಲ್ಲ.

ಕೆಲವು ತಾಸು ಕ್ರಮಿಸಲು "ಮುಸಲ್ಮಾನರು ಅಗಸೆ ಬಾಗಿಲಲ್ಲಿ ತಳವೂರಿರುವರು" ಎಂಬ ಸುದ್ದಿಯು ಎಲ್ಲೆಡೆಯಿಂದಲೂ ಎದ್ದಿತು. ಅರಸನು ಗಾಬರಿಯಾದನು. ಸತ್ಯಸಂಗತಿಗಳನ್ನು ತಿಳಿದುಕೊಂಡು ಬರುವ ಬಗ್ಗೆ ಗುಪ್ತಚಾರರನ್ನು ಕಳಿಸುವ ಆಲೋಚನೆ ಮಾಡಿದನು. ಗುಪ್ತಚಾರನ ಕೆಲಸವು ಬಹಳ ಜವಾಬ್ದಾರಿಯ ಕೆಲಸವಾದುದರಿಂದ ಈ ಕೆಲಸಕ್ಕೆ ಯಾರೂ ಸಿದ್ಧರಾಗಲಿಲ್ಲ. ಆದರೆ ಕೃಷ್ಣರಾಯನು ಮಾತ್ರ ಉಲ್ಲಾಸದಿಂದ ಸಿದ್ಧನಾದನು. ಅರಸನು ಕೃಷ್ಣರಾಯನ ಕೃಷ್ಣಹೃದಯವನ್ನು ಅರಿತಿರಲಿಲ್ಲ. ಯಾರಿಗೂ ಅದರ ಅರಿವು ಇರಲಿಲ್ಲ. ಆದರೆ ವೀರಮತಿಗೆ ಮಾತ್ರ ಆತನ ಮೇಲೆ ಮೊದಲಿನಿಂದಲೇ ಸಂಶಯ ಬಂದಿತು. ಆತನು ಗುಪ್ತಚಾರನ ಕೆಲಸಕ್ಕೆ ಹೋಗಲು ಸಿದ್ಧನಾದುದನ್ನು ನೋಡಿಯಂತೂ ಆಕೆಯ ಸಂಶಯವು ಇನ್ನಷ್ಟು ಧೃಡವಾಯಿತು. ದೇಶದ ಚಿಂತೆಯಿಂದ ಆಕೆಯು ವ್ಯಾಕುಲಗೊಂಡಳು. ಅವಳಿಗೆ ಬಹಳ ದುಃಖವಾಯಿತು. ಕಟ್ಟಕಡೆಗೆ ಆ ವೀರಸತಿಯು ಪುರುಷವೇಷವನ್ನು ಧರಿಸಿ ಪತಿಯನ್ನು ಹಿಂಬಾಲಿಸಿದಳು.

ಅಮಾವಾಸ್ಯೆಯೂ ಮಧ್ಯರಾತ್ರಿಯಾಗಿತ್ತು. ಒಬ್ಬರಿಗೆ ಇನ್ನೊಬ್ಬರು ಕಾಣಿಸದಷ್ಟು ಕತ್ತಲೆಯು ತುಂಬಿಕೊಂಡಿತ್ತು. ಇಂತಹ ಸಮಯದಲ್ಲಿ ಒಂದು ಕಟ್ಟಡವಿಯಲ್ಲಿ ಕೃಷ್ಣರಾಯನೂ ಅಲ್ಲಾಉದ್ದೀನನ ಸರದಾರನಾದ ಮಲಿಕಾಫರನೂ ಸಂಭಾಷಣೆ ನಡಿಸಿದರು. ವೀರಮತಿಯ ಸಂದೇಹವು ಸತ್ಯವಾಯಿತು. ಆಕೆ ಅವರಾಡುವ ಮಾತುಗಳನ್ನು ಕಿವಿಗೊಟ್ಟು ಕೇಳಹತ್ತಿದಳು. ಮೊದಮೊದಲು ಅವು ಸ್ಪಷ್ಟವಾಗಿ ಕೇಳಿಸಲಿಲ್ಲ. ವೀರಮತಿಯು ಇನ್ನೂ ಸ್ವಲ್ಪ ಮುಂದಕ್ಕೆ ಹೋಗಿ ಒಂದು ಗಿಡದ ಮರೆಗೆ ನಿಂತಳು.

"ತಾವು ಹೀಗೆ ಮಾಡಿದುದಾದರೆ ನಮ್ಮ ಬಾದಶಹನು ನಿಮಗೆ ಖಂಡಿತವಾಗಿ ದೇವಗಿರಿಯ ಸುಭೇದಾರಿಕೆಯನ್ನು ಕೊಡುವನು" ಮಲಿಕಾಫರನು ನಗು ನಗುತ್ತ ಹೇಳಿದನು.

"ಆ ಬಗ್ಗೆ ನಿಮಗೆ ಸಂಶಯವೇ ಬೇಡ. ನಾನದನ್ನು ಅವಶ್ಯವಾಗಿ ಮಾಡಿಯೇ ಮಾಡುವೆನು" ಕೃಷ್ಣರಾಯನು ಆನಂದದಿಂದ ಉತ್ತರ ಕೊಟ್ಟನು.

ಈ ಮಾತುಗಳನ್ನು ಕೇಳಿ ವೀರಮತಿಯ ದೇಹವು ಒಂದೇ ಸವನೆ ಕಂಪಿಸಹತ್ತಿತು. ಒಂದು ಭಯಂಕರವಾದ ವಿಚಾರವು ಆಕೆಯ ಮನದಲ್ಲಿ ಮೂಡಿತು. ಮನಸ್ಸು ಚಂಚಲವಾಯಿತು. ಒಂದೆಡೆ ಪತಿಯ ಮೋಹ, ಇನ್ನೊಂದೆಡೆ ಪತಿಗಿಂತ ಪ್ರಧಾನ್ಯವಾದ ರಾಷ್ಟ್ರಪ್ರೇಮ. ಮಾತೃ ಭೂಮಿಯ ರಕ್ಷಣೆ ಮಾಡಬೇಕಾದರೆ ಪತಿಯ ಮೋಹವನ್ನು ವಿಸರ್ಜಿಸಬೇಕು. ಇಂತಹ ಸಮಯದಲ್ಲಿ ಆಕೆ ಏನು ಮಾಡಬೇಕು? ಆದರೆ ವೀರಮತಿಯು ವೀರ ಪಿತನ ವೀರ ಪುತ್ರಿಯಾಗಿದ್ದಳು. ತನ್ನ ಕರ್ತವ್ಯವನ್ನು ಪಾಲಿಸುವದಕ್ಕಾಗಿ

ಕೆ ಧೈರ್ಯವಂತಳಾದಳು. ತನ್ನ ೊಂಟದಲ್ಲಿ ಅಲೆದಾಡುತ್ತಿರುವ ಖಡ್ಗವನ್ನು ತೆಗೆದು ಒಮ್ಮೆಯೇ ಅದನ್ನು ಕೃಷ್ಣರಾಯನ ಹೃದಯ ನಲ್ಲಿ ಚುಚ್ಚಿದಳು. ಸಳ್ಳನೆ ರಕ್ತ ಂಚನವಾಯಿತು. ಕೃಷ್ಣರಾಯನು ಇಳೆಗುರುಳಿದನು. ಮುಸಲ್ಮಾನ ಸರದಾರರು ದಿಕ್ಕೆಟ್ಟು ಓಡಿಹೋ ನರು. ಕೃಷ್ಣರಾಯನ ಹೃದಯ ಿಂದ ರಕ್ತದ ಝರಿಯು ಒಂದೇ ಸವನೆ ಹರಿಯುತ್ತಿತ್ತು. ವೀರ ಮತಿಯು ಪುರುಷ ಪೋಷಾಕನ್ನು ತೆಗೆದಿಟ್ಟು ಕೃಷ್ಣರಾಯನ ಶಿರ ವನ್ನು ತನ್ನ ತೊಡೆಯ ಮೇಲಿಟ್ಟು ಕೊಂಡಳು. ಕೃಷ್ಣರಾಯನು ಕಣ್ಣೀರು ಸುರಿಸುತ್ತ "ನನ್ನ ಮುದ್ದು ವೀರಮತೀ, ನೀನು ಒಳ್ಳೆ ಕಾರ್ಯ ಕೆಲಸವನ್ನೇ ಮಾಡಿದೆ. ದೇಶ ದ್ರೋಹಿಯ ಕೊಲೆಮಾಡಿ ನನ್ನನ್ನು ಅಧರ್ಮದಿಂದ ಬದುಕಿಸಿದೆ. ಆದರ್ಶ ಪತ್ನಿಯಾದೆ. ವೀರಮತೀ, ನೀನು ನನ್ನ ಪತ್ನಿಯಲ್ಲ. ಸ್ವರ್ಗ ದಿಂದ ಭೂಲೋಕಕ್ಕೆ ಇಳಿದ ದೇವ ತೆಯಿರುವಿ! ದೇವಗಿರಿಯ ರಾಜ್ಯ ಲಕ್ಷ್ಮಿಯಿರುವಿ!! ದೇವಗಿರಿಯ ಭಾಗ್ಯ ಚಂದ್ರಿಕೆ ಇರುವಿ!!! ಧನ್ಯ ವೀರಮತೀ! ನೀನು ನಿಜವಾಗಿಯೂ ಧನ್ಯಳಾದೆ" ಪಶ್ಚಾತ್ತಾಪದಿಂದ ಆತನ ಕಣ್ಣುಗಳು ಅಶ್ರುಗಳಿಂದ ತುಂಬಿದವು. ಮುಖದಿಂದ ಮಾತು ಗಳೇ ಹೊರಡಲಿಲ್ಲ.

'ಪ್ರೇಮ ದೇವಾ, ನಿಮ್ಮ ಮೇಲೆ ಇಟ್ಟಿದ್ದ ನನ್ನ ಪ್ರೇಮದಲ್ಲಿ ಯಾವ ದೋಷವನ್ನು ಕಂಡಿರಿ? ಏತಕ್ಕೆ ನಿಮಗೆ ಇಂತಹ ದುರ್ಬುದ್ಧಿಯು ಪ್ರಾಪ್ತವಾಯಿತು? ಹೃದಯೇಶ್ವರಾ, ನಿಮ್ಮನ್ನು ನಾನು ಎಷ್ಟು ಬಗೆಯಾಗಿ ಪ್ರೀತಿಸುತ್ತಿದ್ದೆನು? ಆ-ದ-ರೆ ಇಂದು [ನನ್ನ ಈ ಕರಗಳಿಂದಲೇ ತಮ್ಮನ್ನು ವಧಿಸಿದೆನು. ನಾಥಾ, ಇಂತಹ ಕಠೋರಕೃತ್ಯವನ್ನು ಯಾವ ಸ್ತ್ರೀಯಳೂ ಮಾಡಲಾರಳು ಆದರೆ ನಿಮ್ಮನ್ನು ದೇಶ ದ್ರೋಹದಂತಹ ದುರ್ಗಂಧ ಪಾಪ ದಿಂದ ಬದುಕಿಸುವದಕ್ಕಾಗಿ ಹೀಗೆ ಮಾಡಬೇಕಾಯಿತು. ಇದನ್ನು ಪರಮೇಶ್ವರನೊಬ್ಬನೇ ಬಲ್ಲನು. ಪ್ರಾಣ ನಾಥ, ತಾವು ನನ್ನ ಪತಿಗಳು: ನನ್ನ ಜೀವನ ಸರ್ವಸ್ವರು. ನನ್ನ ಪ್ರೀತಿಯ ಪರಮೇಶ್ವರರು. ಆದರೆ ನನ್ನ ದೇಶವು ನನಗೆ ನಿಮಗಿಂತಲೂ ಹೆಚ್ಚಿನ ಪ್ರೀತಿಯದು ನನ್ನ ದೇಶದ ಮುಂದೆ ನನಗೆ ಪತಿ, ಪಿತ, ಮಿತ್ರರು ಹೆಚ್ಚಿನವರಾಗಿ ತೋರುವದಿಲ್ಲ. ಸ್ವದೇಶ ಸ್ವಾತಂತ್ರ್ಯಕ್ಕಾಗಿ ನಾನಿಂದು ನನ್ನ ಕರ್ತವ್ಯದ ಪಾಲನೆ

(೪೨ನೆ ಪುಟ ನೋಡಿರಿ)

### ನಿಮ್ಮನ್ನು ಹೆದರಿಸುವ ಆ ಜೈಲು!



# ದರೋಡೆಯ ಪತ್ತೆ ಹಚ್ಚುವುದಕ್ಕಾಗಿ ಪೋಲೀಸರ - - - - - - ದರೋಡೆ!



**ಢಕಾಯಿತಿನ ತಕ್ಷೀರುಗೊಳಗಾಗಿ ಏಳು ವರ್ಷ ಕಠಿನ ಶಿಕ್ಷೆ ಪಡೆದು ಮದ್ರಾಸ್ ಪ್ರಾಂತ್ಯದ ಬೇರೆ ಬೇರೆ ಜೈಲುಗಳಲ್ಲಿದ್ದು ಬಂದವರೊಬ್ಬರ ಆತ್ಮಕಥೆಯಿದು.**

**ಲೇಖಾಂಕ ೨.**

ನಾನು ಮಾಸ್ತರರ ಮನೆಯ ಕಡೆ ನೋಡುತ್ತಾ ಇದ್ದೆ. ಆ ದಿಕ್ಕಿನಿಂದ ನನ್ನನ್ನು ನುಂಗುವ ಹೆಬ್ಬುಲಿಯೊಂದು ಬಾಯಿ ತೆರೆದುಕೊಂಡು ಬರಲಿರುವದೆಂಬಂತೆ ತೋರುತ್ತಿತ್ತು ನನಗೆ. ಮನೆಯ ಒಳಗೊಮ್ಮೆ ಹೊರಗೊಮ್ಮೆ ಹೋಗುತ್ತಾ ಕೆಲವು ಘಂಟೆಗಳನ್ನು ಕಳೆದೆ. “ಹೋ! ಬಂತು-ಆ ಕಡೆಯಿಂದಲೇ ಯಾರೋ ನನ್ನ ಮನೆಯತ್ತ ಬರುತ್ತಿದ್ದಾರೆ!” ಕೋಚಣ್ಣ ಸೆಟ್ಟರ ಒಕ್ಕಲು ದೂಮಣ್ಣ ಒಂದು ಆ ಬಾಗಲಲ್ಲೊಮ್ಮೆ ಈ ಬಾಗಲಲ್ಲೊಮ್ಮೆ ಇಣಿಕಿದ. ನನಗರಿವಿಲ್ಲದೇನೆ ನಾನಾ ಸಮಯದಲ್ಲಿ ಮನೆಯೊಳಗೆ ಹೋಗಿ ಕುಳಿತಿದ್ದೆ. ‘ಬಾಯಮ್ಮಾ! ನಿಮ್ಮ ಮಗನಿಲ್ಲವೆ?’ ಎಂದು ಅಮ್ಮ ನನ್ನು ಕೂಗಿ ಕೇಳಿದ. ‘ಹ್ಞಾಂ! ಇದ್ದೇನೆ.’ ... ಏನು ... ಏನು?’ ನಾನು ದಿಗಿಲು ಬಡಿದ ಧ್ವನಿಯಲ್ಲಿ ಕೇಳಿದೆ. ‘ಸಬ್ ಇನ್‌ಸ್ಪೆಟ್ಲರು ನಿಮ್ಮನ್ನು ಮಾಸ್ತರರ ಮನೆಗೆ ಬರಲಿಕ್ಕೆ ಹೇಳಿದರು” ಎಂದ ದೂಮಣ್ಣ. ‘ಹೂಂ ಹಾಂ’ ಎನ್ನುತ್ತಾ ನನ್ನ ಗಾಬರಿಯನ್ನು ಆದಷ್ಟು ಬಚ್ಚಿಟ್ಟುಕೊಂಡು ಬೈರಾಸನ್ನು ಎಳೆದು ಹೆಗಲಿಗೆ ಹಾಕಿಕೊಂಡೆ. ಅಮ್ಮ ಮತ್ತು ನನ್ನ ಹೆಂಡತಿ ಅಳುತ್ತಾ ಓಡಿಬಂದರು. ಅವರಿಗೆ ಸಮಾಧಾನ ಹೇಳಿ ದೂಮಣ್ಣನ ಬೆನ್ನು ಹಿಡಿದೆ.

**ಯಮದೂತರಿದಿರಿನ ಪಾಪಿ!**

ಮಾಸ್ತರರ ಮನೆಯವರೆಗೆ ನಾನು ಹೋದೆ ಹೇಗೆ ಎಂಬುದೇ ನನಗರಿಯದು. ಇಷ್ಟನ್ನು ಹೇಳಬಲ್ಲೆ- ಇದಿರಿನಲ್ಲಿ ದೂಮಣ್ಣನಲ್ಲವಾದರೆ ನಾನು ಹಾದಿ ಕೊಂಡುಹೋದಲ್ಲಿ ಹೋಗುತ್ತಿದ್ದೆ! ನಾನು ನಡೆಯುತ್ತಿದ್ದ ಹಾದಿ ಯಾವುದೆಂಬುದೇ ಆಗ ನನಗೆ ತಿಳಿದಿರಲಿಲ್ಲ. ಮತ್ತೆಲ್ಲಿಗೆ? ಪ್ರತ್ಯಕ್ಷ ಅಗ್ನಿಕುಂಡದ ಕಡೆಗೆ- ನನಗೆ ಗೊತ್ತಿದ್ದುದು ಇಷ್ಟೆ. ಮಾಸ್ತರರ ಮನೆ ಸಮೀಪವಾದಂತೆ ನನ್ನ ಆಯುಷ್ಯವನ್ನೇ ನಾನು ಸಮೀಪಿಸುತ್ತಿದ್ದೇನೆಂಬಂತೆ ಎದೆಯು ಬಡಿಯುತ್ತಿತ್ತು. ಹೇಗೂ ಮನೆಯೊಳಗೆ ಪ್ರವೇಶಿಸಿದೆ. ಚಾವಡಿಯಲ್ಲಿ ಒಂದು ಕುರ್ಚಿಯ ಮೇಲೆ ಇನ್ಸ್ಪೆಕ್ಟರರು ಕುಳಿತಿದ್ದರು. ನಾಲ್ವರು ಪೋಲೀಸರು ನಾಲ್ಕು ಕಡೆಗಳಲ್ಲಿ ನಿಂತಿದ್ದರು. ಕೋಚಣ್ಣ ಸೆಟ್ಟರು ಇನ್ಸ್ಪೆಕ್ಟರರೊಡನೆ ಏನನ್ನೊ ಮಾತನಾಡುತ್ತಿದ್ದವರು ನಾನು ಹೋದೊಡನೆಯೇ ‘ಅವ ಬಂದ’ ಎಂದರು. ಸೆಟ್ಟರ ಒಕ್ಕಲುಗಳು ನಾಲ್ಕಾರು ಮಂದಿ ಅಲ್ಲೇ ಅಂಗಳದಲ್ಲಿ ಕುಳಿತಿದ್ದರು. ಇಷ್ಟು ಜನರಲ್ಲದೆ ಅಲ್ಲಿ ಊರಿನವರಾರೂ ಇರಲಿಲ್ಲ. ನಾನು ‘ಎಲ್ಲಿಯೋ ಏನೋ’ ಆಗಿ ಹೋಗಿದ್ದೆ. ಇನ್ಸ್ಪೆಕ್ಟರರಿಗೆ ಒಮ್ಮೆ ಬಗ್ಗಿ ‘ಸ್ವಾಮಿ’ ಎಂದೆನೆಂದು ನನ್ನ ನೆನಪು. ಇಂತಹ ಸಂದರ್ಭಗಳಲ್ಲಿ ಧೈರ್ಯ ತಂದುಕೊಳ್ಳಬೇಕೆಂದು ನನಗೆ ಗೊತ್ತಿತ್ತು.

ಆದರೇನು ಮಾಡಲಿ? ಧೈರ್ಯವನ್ನೆಲ್ಲಿಂದ ತರಲಿ? ಇನ್ಸ್ಪೆಕ್ಟರರಿದಿರಿನಲ್ಲಿ ಕೈಕಟ್ಟಿ ನಿಂತಿದ್ದ ನನ್ನ ಕೈಕಾಲುಗಳು ಅಲ್ಲಿಂದಲ್ಲೇ ನಡುಗುತ್ತಿದ್ದವು. ನಿಂತ ನೆಲವಮರುತ್ತಿತ್ತೆಂದು ನನಗೆ ಭಾಸವಾಯಿತು. ಎರಡು ಮಿನಿಟಿನ ವರೆಗೆ ಇನ್ಸ್ಪೆಕ್ಟರರು ನನ್ನ ಗೊಡವೆಯನ್ನೇ ಬಿಟ್ಟವರಂತೆ ಕೋಚಣ್ಣ ಸೆಟ್ಟರೊಡನೆ ಮಾತಾಡುವುದರಲ್ಲೇ ಇದ್ದರು. ಮಧ್ಯೆ ಒಂದೆರಡು ತಡವೆ ಕಳ್ಳ ದೃಷ್ಟಿಯಿಂದ ತೀಕ್ಷ್ಣವಾಗಿ ನನ್ನನ್ನು ನೋಡಿದ್ದರು. ಮಾತನ್ನು ಮಧ್ಯದಲ್ಲಿಯೇ ನಿಲ್ಲಿಸಿ ಫಕ್ಕನೆ ನನ್ನ ಕಡೆಗೆ ತಿರುಗಿ 'ನೀನು ಈ ರಾತ್ರಿ ನಿನ್ನ ಮನೆಗೆ ಎಷ್ಟು ಹೊತ್ತಿಗೆ ಹೋದಿ?' ಎಂದರು. 'ನಾನು ನಿನ್ನೆ ಸಾಯಂಕಾಲದಿಂದ ಮನೆಯಲ್ಲೇ ಇದ್ದೆ ಸ್ವಾಮಿ!' ನಾನು ನಮ್ರತೆಯಿಂದ-ಆದಷ್ಟು ಧೈರ್ಯದಿಂದ ಹೇಳಿದೆ. "ಏನು?" ಎನ್ನುತ್ತಾ ಇನ್ಸ್ಪೆಕ್ಟರರು ಕುರ್ಚಿಯಿಂದೆದ್ದು 'ಸಿಕ್ಕಿಸು ಇವನ ಕೈಗೆ ಕೋಳ' ಎಂದರು. ಇಬ್ಬರು ಪೋಲೀಸರು ನನ್ನ ಕೈಗೆ ಕೋಳ ಹಾಕಿದರು. ಹೆದರುವ ಅಂಶವೆಲ್ಲಾ ಮುಗಿದು ಹೋದುದರಿಂದಲೋ — ಯಾ — ಯುದ್ಧದ ಶಿಸ್ತಿನ ಪರಿಣಾಮವಾಗಿಯೋ-ಅಂತೂ ಆ ಸಂದರ್ಭದಲ್ಲಿ ನನ್ನಲ್ಲೊಂದು ವಿಧದ ಧೈರ್ಯ ಬಂದಿತ್ತು. ನಾನು ಕದಲದೆ ನಿಂತುಕೊಂಡೆ. ಸಬ್ ಇನ್ಸ್ಪೆಕ್ಟರರು ಔಡು ಕಚ್ಚುತ್ತಾ ಉರಿಗಣ್ಣಿನಿಂದ ದುರದುರನೆ ಸ್ವಲ್ಪ ಸಮಯ ನನ್ನ ಮುಖ ನೋಡಿದರು. ಆ ಮೇಲೆ ಅವರು ಹೇಳಿದರು "ನೋಡು- ಸೋಜ ಮತ್ತು ಅಹಮ್ಮದನನ್ನು ಹಿಡಿದು ಬಾಯಿ ಬಿಡಿಸಿ ಆಯಿತು. ನಿಮ್ಮ ಕೃತ್ಯವೆಲ್ಲಾ ರುಜುವಾಗಿದೆ. ನೀನಾದರೂ ಸುಳ್ಳು ಹೇಳದಿಯೆಂದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ಹೇಳು! ನಿನ್ನ ಪಾಲಿಗೆ ಬಂದ ಹಣ ಮತ್ತು ಸಾಮಾನು ಎಲ್ಲಿ ಇಟ್ಟಿರುವಿ? ಅಹಮ್ಮದ್ ಮತ್ತು ಸೋಜ ಹೇಳಿಯಾಯಿತು! ಎಲ್ಲದೆ ಹೇಳು?"

"ನನಗೆ ಏನೊಂದೂ ತಿಳಿದಿಲ್ಲ ಸ್ವಾಮಿ! ನಾನು ನಿನ್ನೆ ರಾತ್ರಿ ಮನೆಯಲ್ಲಿ .... ...."

"ಛೆಕ್ ಬಂಫೋತ್!" ಇನ್ಸ್ಪೆಕ್ಟರರು ಸಟಾರೆಂದು ನನ್ನ ಕೆನ್ನೆ ತಿರುಗಿಸಿ ಬಿಟ್ಟರು. "ತೆಗಿ

**ಬಾಯಿಬಿಡಿಸುವ ಪೋಲಿಸರ ಡುಬ್ ಡುಬ್ ಗುದ್ದಿನಿಂದ ಬಾಯಿ ಬಿಟ್ಟೆ —'ಅಯ್ಯೋಯ್ಯೋ' ಎಂದು!**

ಅವನ ಕೈಕೋಳ. ಅವ ಬಾಯಿ ಬಿಡುತ್ತಾನೋ ಇಲ್ಲವೋ ನೋಡೋಣ!" ನಾಲ್ವರು ಪೋಲೀಸರೂ ಓಡಿಬಂದು ಕೈಕೋಳ ತೆಗೆದು ನನ್ನ ರಟ್ಟೆಗಳನ್ನು ಹಿಂದಕ್ಕೆಳೆದು ಕಟ್ಟಿ ಬಗ್ಗಿಸಿದರು.

**ಬೆನ್ನಿನ ಗುದ್ದು-ಬಾಯಿ ಬಿಡಿಸುವ ಮದ್ದು!**

ಆ ಚಿತ್ರವು ನಿಮ್ಮ ಕಣ್ಣ ಮುಂದೆ ಬಂತೋ ಇಲ್ಲವೋ ನಾನರಿಯೆ. ನೀವು ಮಂಗ ಕುಣಿಸುವವರನ್ನು ನೋಡಿರಬಹುದು 'ಅತ್ತೇಯಾ - ಮನೇಗೇ - ಬಾಳೆಗೊನೇ ಹೊರುವದು ಹೇಗೇ- ಮಂಗಾಣ್ಣಾ-' ಎಂದು ಕುಣಿಸುವವನು ರಾಗ ಎಳೆಯುತ್ತಾ ತನ್ನ ಕೋಲನ್ನು ನೆಲಕ್ಕೆ ಬಡಿದೊಡನೆ ಎರಡೂ ರಟ್ಟೆಗಳನ್ನು ಬೆನ್ನಿಗಿಟ್ಟುಕೊಂಡು ಬಗ್ಗುತ್ತಾ ಹಿಂದಕ್ಕೂ ಮುಂದಕ್ಕೂ ಕಪಿ ಹೋಗುವುದುಂಟಲ್ಲ-ಹಾಗೆಯೇ ಪೋಲೀಸರು ನನ್ನ ರಟ್ಟೆಯ ಕಟ್ಟನ್ನು ಹಿಡಿದು ಹಿಂದಕ್ಕೊಮ್ಮೆ ಮುಂದಕ್ಕೊಮ್ಮೆ ದೂಡಿ 'ಹೇಳು' ಎಂದರು. ನಾನೇನೆಂದು ಹೇಳಲಿ? ಮಿಂಡೋಸರು ಬಂದು ಆ ದಿನ ಬೆಳಿಗ್ಗೆ ಹೇಳಿ ತಿಳಿಸಿದ ಆ ವರೋಡೆಯ ಸಂಗತಿಯನ್ನೆಲ್ಲಾ ನಾನೇ ಮಾಡಿದೆನೆಂದು ಹೇಳಬೇಕೆ? 'ಇಲ್ಲ. ಒಂದುದನ್ನೆಲ್ಲ ಅನುಭವಿಸಿಯೇ ಸಿದ್ಧ. ಎಲ್ಲವನ್ನೂ ಆ ದೇವರು ನೋಡಿದರೆ ಸಾಕು!' ಎಂದುಕೊಂಡೆ. 'ಇಲ್ಲ ತಾ ಅವನನ್ನು!' ಎಂದು ಕೈ ಬೀಸಿದರು ಇನ್ಸ್ಪೆಕ್ಟರರು. ನಾನು ತನ್ನಂತೆ ಬಾಗಿದ ಬೆನ್ನಿನ ನಮ್ರತೆಯೊಡನೆ ಇನ್ಸ್ಪೆಕ್ಟರರ ಪ್ರತ್ಯಕ್ಷ ಮುಂಭಾಗಕ್ಕೆ ಮತ್ತೊಮ್ಮೆ ತರಲ್ಪಟ್ಟೆ. ಬೆನ್ನಿನ ಕೆಳಭಾಗದಲ್ಲಿ ಕೈಯ್ಯು ಕಟ್ಟಿತ್ತು; ಮೇಲ್ಭಾಗವು ಬಾಕಿಯುಳಿದುದನ್ನು ಆಮಂತ್ರಿಸುವ ಸಲುವಾಗಿ ತೆರವಾಗಿತ್ತು. ಅದೂ ಬಹಳ ಹೊತ್ತು ಬಾಕಿ ಬೀಳಲಿಲ್ಲ. 'ನಿನಗೆ ಹೇಳಲಿಕ್ಕಾಗುವುದಿಲ್ಲವೆ? ಅಗೋ, ಸೋಜ ಮತ್ತು ಅಹಮ್ಮದ್ ಆ ಕೋಣೆಯಲ್ಲಿದ್ದಾರೆ. ಐನೂರು ರೂಪಾಯಿ ಮತ್ತು ಒಂದು ಕವಾಟು ನಿನ್ನ ಪಾಲಿಗೆ ಬಂದಿದೆಯಂತೆ. ಅದನ್ನು ಎಲ್ಲಿಟ್ಟಿರುವಿಯೆಂದು ಹೇಳಿದಿಯಾದರೆ ನಿನ್ನನ್ನು ಬಿಟ್ಟುಬಿಡುತ್ತೇವೆ. ಇಲ್ಲವಾದರೆ ನಿನ್ನನ್ನು ಫಾಶಿ-ಫಾಶಿ ಕಂಭಕ್ಕೆ ತೂಗಾಡಿಸದೆ ಬಿಡುವ ಹಾಗಿಲ್ಲ!' ಈಗ ನನಗೆ ಅಳು ಬಂತು. 'ಮೇಲಿನಿಂದ ಎಲ್ಲ

ವನ್ನೂ ನೋಡುವಾತ ದೇವನಿದ್ದಾನೆ-ಅವ ನೋಡಬೇಕು-ನನಗೆ ಕನ ಮನಸಿನಲ್ಲಿ ಗೊತ್ತಿಲ್ಲ ಸ್ವಾಮಿ! ಈ ಭೂಮಿ ಸಾಕ್ಷಿಯಾಗಿ ನಾನೊಂದೂ ಅರಿಯೆ!' ಎಂದು ನೆಲಮುಟ್ಟಲು ಪ್ರಯತ್ನಿಸಿದೆ. 'ಏನು? ನೀನು ಅರಿಯೆ!' ಎಂದು ಇನ್ಸ್ಪೆಕ್ಟರಗು ಹಲ್ಲು ಕಡಿಯುವ ಸದ್ದು ಕೈಕಟ್ಟಿದುದರಿಂದ ನೆಲ ಮುಟ್ಟಲಾಗದೆ ನೆಟ್ಟಗಾಗುತ್ತಿದ್ದ ನನಗೆ ಕೇಳಿಸಿತು. ಆಗಲೇ ಡಬ್ ಡಬ್ ಎಂದು ಏಳೆಂಟು ಗುದ್ದುಗಳು ನನ್ನ ಬೆನ್ನ ಮೇಲೆ. ಕಣ್ಣು ಕತ್ತಲೆ ಬಂದಂತಾಯಿತು. ಕಣ್ಣುಗಳಲ್ಲಿ ನೀರು ತುಂಬಿತು-ಗಳಗಳನೆ ಅತ್ತೆ. 'ಹೇಳು-ಬಾಯಿ ಬಿಡು-ಬೇಗ ಹೇಳು.' ಪುನಃ ಬಗ್ಗಿಸಿ ಗುದ್ದಿದರು ಪೋಲೀಸರು. ಬಾಯಿ ಬಿಟ್ಟೆ-ಬಾಯಿ ಬಿಟ್ಟು 'ಅಯ್ಯಯ್ಯೋ' ಎಂದೆ! ಬಹಳ ಹೊತ್ತಿನ ವರೆಗೆ ಹೀಗೆಯೇ ನಡೆಯಿತು. ಪೋಲಿಸರು ಬಾಯಿ ಬಿಡಿಸಲು ಗುದ್ದಿದಷ್ಟೂ ನನ್ನ ಬಾಯಿಂದ ಹೊರಡುತ್ತಿದ್ದುದು 'ಅಯ್ಯೋ' ಎಂಬ ಗೋಳಾಟ ಮಾತ್ರ. ಕೊನೆಗೆ ಇನ್ಸ್ಪೆಕ್ಟರರ ಆಜ್ಞೆಯಂತೆ ಪೋಲಿಸರು ನನ್ನನ್ನು ದೂಡಿಕೊಂಡು ಹೋಗಿ ಆ ಮನೆಯ ಒಂದು ಕೋಣೆಯೊಳಗೆ ಸೇರಿಸಿ ಬೀಗಹಾಕಿದರು. ಅಲ್ಲಿ ಸೋಜ ಮತ್ತು ಆಹಮದ್ ಇಬ್ಬರೂ ಇದ್ದರು. ಅವರ ಮುಖಗಳಲ್ಲಿಯೂ ಕಣ್ಣೀರಿನ ಕಲೆಗಳಿದ್ದವು. ನಮ್ಮೊಳಗಿನ ಮಾತುಕತೆಯಿಂದ ಅವರಿಗೂ ಹೀಗೆಯೇ ಗುದ್ದುಗಳು ಬಿದ್ದಿದ್ದುವೆಂದೂ, ಒಬ್ಬೊಬ್ಬರನ್ನೇ ಹಿಡಿದು-ಇನ್ನೊಬ್ಬ ಗುಟ್ಟು ಹೇಳಿಯಾಯಿತೆಂದು ಹೇಳಿ ಬಾಯಿ ಬಿಡಿಸಲು ನೋಡಿದ್ದರೆಂದೂ ತಿಳಿಯಿತು. ಅವರೂ ನನ್ನಂತೆಯೇ ಬಾಯಿ ಬಿಟ್ಟಿದ್ದರು! ಆಹಮ್ಮದ್ ಮತ್ತು ಸೋಜ ಇಬ್ಬರೂ ನನ್ನೊಡನೆ ತಾವು ಯಾವುದನ್ನೂ ಅರಿಯೆನೆಂದು ನನ್ನ ಕುತ್ತಿಗೆಗೆ ಕೈಯಿಟ್ಟು ಮೂರು ಮೂರು ಸಲ ನೆಲ ಮುಟ್ಟಿ ಹೇಳಿದರು. ಆ ಕೋಣೆಯಲ್ಲಿ ಈ ರೀತಿ ಒಂದೇ ಆಪತ್ತಿಗೊಳಗಾದ ನಾವುಮೂವರು ಒಟ್ಟಾದುದರಿಂದ, ಆ ಮೊದಲೊದಗಿದ್ದ ಗಂಡಾಂತರದಿಂದ ಒಮ್ಮೆಗೆ ಪಾರಾದುದರಿಂದ-ಒಂದು ವಿಧದ ಆನಂದವನ್ನನುಭವಿಸಿದೆವು.

### ನನ್ನ ಕುಟುಂಬಕ್ಕೇನು ಗತಿ?

ಹೀಗೆ ನಾನು, ಸೋಜ, ಅಹಮ್ಮದ್ ಕೋಣೆಯೊಳಗಾದೆವು. ಮೈಯಲ್ಲಿ ಗುದ್ದಿನ ನೋವಿತ್ತಾದರೂ ಮನಸ್ಸಿನ ನೋವಿನೆದಿರಿನಲ್ಲಿ ಅದು ಲಕ್ಷ್ಯಕ್ಕೆ ಬರಲಿಲ್ಲ. ನನ್ನ ಮನೆ, ಮುದಿ ತಾಯಿ, ಗರ್ಭಿಣಿ ಹೆಂಡತಿ ಅವರನ್ನು ಕಷ್ಟಕ್ಕೀಡುಮಾಡಿ ಮುಂದಕ್ಕೆ ನಾನು ಪಡಬೇಕಾಗಿರುವ ನರಕಯಾತನೆ-ಇವನ್ನೆಲ್ಲಾ ಸ್ಮರಿಸಿಕೊಂಡು ನಾನು ಮನಸಿನಲ್ಲೇ ಗೋಳಿಟ್ಟೆ. ಒಂದು ಸಂಗತಿ ಹೇಳುತ್ತೇನೆ-ನಿಮ್ಮಲ್ಲಿ ಅಂತಹ ಗಂಡಾಂತರಗಳಿಗೊಳಗಾದವರಾರಾದರೂ ಇದ್ದರೆ ಅವರಿಗದರ ಅನುಭವವಿರಬಹುದು-ಆಪತ್ಕಾಲದಲ್ಲಿ ಒಂದು ವಿಧದ ಧೈರ್ಯವುಂಟಾಗುತ್ತದೆ. ದೂರದಲ್ಲಿದ್ದಾಗ ಭಯಂಕರವಾಗಿ ಕಾಣುವ ಆಪತ್ತಿನೊಳಗೆ, ನಾವು ಸ್ವತಃ ಹೊಕ್ಕಾಗ ಅದರ ಪರಿಚಯ, ಸಲಿಗೆಯ ಬಲದಿಂದಲೋ ಏನೋ-ಅದು ಸ್ವಲ್ಪ ಸುಲಭವಾಗಿ ಕಾಣುವದುಂಟು. ನಮ್ಮ ಮೈಮೇಲೆ ಬಂದುದು ಸ್ವಲ್ಪ ಸುಲಭ ಕಂಡಂತೆಯೇ ಆ ಕಾಲದಲ್ಲಿಯೂ ದೂರದಲ್ಲಿದ್ದುದೇ ಭಯಂಕರವಾಗಿ ಕಾಣುವದು. ಹೀಗಾಗಿ ನಮಗೆ, ನಮ್ಮಿಂದ ದೂರವಾಗುವ ಹೆಂಡಿರ ಮಕ್ಕಳ ಅವಸ್ಥೆಯು ಭಯಂಕರವಾಗಿ ಕಾಣಹತ್ತಿತು. ಪೋಲೀಸರು ನನ್ನನ್ನು ಗುದ್ದುತ್ತಿದ್ದಾಗ ಹೊರಗಡೆಯಲ್ಲಿ ತಾಯಿಯ ಕೂಗು ಕೇಳಿದ್ದ ನೆನಪಾಯಿತೊಮ್ಮೆ. ಹೌದು, ನಾನು ಮಾಸ್ತರರ ಮನೆಗೆ ಹೊರಟೊಡನೆಯೇ ತಾಯಿ ಅಳುತ್ತಾ ಅಲ್ಲಿ ಬಂದಿರಬೇಕೆಂದು ನೆನಸಿಕೊಂಡೆ. ಆದರೆ ಮಾಸ್ತರರ ಮನೆಯೊಳಗೆ ಬರಲಿಕ್ಕೆ ಬಿಡದೆ ಪೋಲಿಸರು ಬಾಗಿಲು ಹಾಕಿ ಕೊಂಡುದು ನೆನಪಾಯಿತು. "ಓ ದೇವಾ! ನನಗೊಂದು ಮುದಿ ತಾಯಿಯಿದೆ; ಹೆಂಡತಿ ಗರ್ಭಿಣಿ! ಪೋಲಿಸರು ಅವರಿಗೂ ಹಿಡಿದು ಹೊಡೆದರೆ?" ಇದನ್ನು ನೆನಸಿಕೊಂಡಾಗ ಎದೆಗೆ ತಿವಿದಂತಾಯಿತು. "ಹೆಂಗಸರ ಮೈಗೆ ಕೈಹಾಕಲಾರರು, ಎಲ್ಲಿಯಾದರೂ ಗದರಿಸಿಯಾರು!" ಮನಸ್ಸಿನ ಸಮಾಧಾನಕ್ಕಾಗಿ ಹೀಗೆ ಭಾವಿಸಿಕೊಂಡೆ "ಇಲ್ಲ-ಅವರಲ್ಲಿ ಕರುಣೆಯೆಂಬುದೇ ಇಲ್ಲ. ಏನೆಲ್ಲಾ ಮಾಡುತ್ತಾರೇನೋ, ದೇವಾ!" ನೆನಸಿ ನೆನಸಿ ಕಣ್ಣೀರಿಳಿಯಿತು. ಆಹಮ್ಮದ ಎರಡೂ ಕೈಗಳನ್ನು ಬೋಳು ತಲೆಯಮೇಲಿಟ್ಟುಕೊಂಡು ಧಾರೆ ಧಾರೆ ಕಣ್ಣೀರು ಸುರಿಸುತ್ತಿದ್ದ; ಸೋಜ ಬಾಗಿಲಸಂದಿನಿಂದ ಹೊರಗಿಣುಕುತ್ತಿದ್ದ.

### ಮನೆ ಮನೆ ಜಪ್ತಿ.

ಈಗ, ನಮ್ಮನ್ನು ಮಾಸ್ತರರ

ಮನೆಯಲ್ಲಿ ಮುಂದಿನ ವಿಚಾರಣೆಗಾಗಿ ಕೋಣೆಯೊಳಗೆ ಸೇರಿಸಿದ ವರೆಗೆ ಹೇಳಿದೆ. ಆ ದರೋಡೆಯಿಂದಾಗಿ ನಾನು ಕಂಡ ಹಲವು ಕೋಣೆಗಳಲ್ಲಿ ಅದೇ ಮೊದಲನೆಯದು. ಆ ಕೋಣೆಯಿಂದ ಕೋಣೆಗೆಂಬಂತೆ ವರ್ಗಾಯಿಸಲ್ಪಟ್ಟ ನಾನು ಅನುಭವಿಸಿದ ಕತೆಯನ್ನು-ಮುಂದಕ್ಕೆ ಹೇಳೋಣ. ಆ ನಡುವೆ ಥಕಾಯಿತಿನ ಪತ್ತೆಹಚ್ಚಲು ಪೋಲಿಸರು ನಡೆಸಿದ ಎಷ್ಟೋ ಸ್ವಾರಸ್ಯದ ಸಂಗತಿಗಳಲ್ಲಿ ಕೆಲವನ್ನಾದರೂ ನಿಮಗೆ ಹೇಳದಿದ್ದರೆ ಈ ಚರಿತ್ರೆಯಲ್ಲಿ ರುಚಿ ತೋರದು. ಆದ್ದರಿಂದ ಅದನ್ನು ಒಂದಿಷ್ಟು ಕೇಳಿ 'ಹೇಗಿದೆ ಸಂಗತಿ' ಎಂದು ನೀವೇ ನಿಮ್ಮ ಷ್ಟಕ್ಕೆ ವಿಚಾರಿಸಿ ಕೊಂಡರೆ ಸಾಕು. ನಮ್ಮ ಕೋಣೆಯ ಬೀಗವನ್ನು ಗಟ್ಟಿಹಾಕಿ, ಸಬ್ಇನ್ಸ್ಪೆಕ್ಟರ್, ಪೋಲಿಸರು, ಕೋಚಣ್ಣ ಸೆಟ್ಟಿ, ಸೆಟ್ಟರ ನಾಲ್ಕಾರು ಒಕ್ಕಲುಗಳು, ಒಟ್ಟಾಗಿ ಸೀದಾ ನನ್ನ ಮನೆಗೆ ಹೋದರು. ಮಾಸ್ತರರ ಮನೆವರೆಗೂ ಬಂದ ಅಮ್ಮ ಬೊಬ್ಬೆ ಹೊಡೆಯುತ್ತಾ ವಾಪಾಸು ಹೋಗಿ, ಅಲ್ಲಿ ಅತ್ತೆ ಸೊಸೆ ಇಬ್ಬರೂ ಕೂಡಿ ತಲೆಬಡಕೊಂಡು ಅಳುತ್ತಾ ಬಿದ್ದಿದ್ದರು. ಪೋಲಿಸರ ಸವಾರಿ ಹೋಯಿತಲ್ಲಿಗೆ. ಕೋಚಣ್ಣ ಸೆಟ್ಟರು ಅಮ್ಮನನ್ನು ಹೊರಕರೆದರು. ಒಂದು ಮೂಲೆಗೆ ಕರಕೊಂಡು ಹೋಗಿ ಹೇಳಿದರಂತೆ "ಇನ್ಸ್ಪೆಕ್ಟರರು ಹೇಳುತ್ತಾರೆ-ತಂದ ಹಣ ಮತ್ತು ಸಾಮಾನು ಕೊಟ್ಟರೆ ನಿಮ್ಮ ಮಗನನ್ನು ಬಿಡುತ್ತಾರಂತೆ-ಏನೂ ಮಾಡುವದಿಲ್ಲವಂತೆ!" ಅಮ್ಮ ನೆಲಮುಟ್ಟಿ "ಯಾವುದೂ ಗೊತ್ತಿಲ್ಲ ನನ್ನ ಮಗುವಿಗೆ! ಅವ ನಿನ್ನೆ ರಾತ್ರಿ ಮನೆಯಲ್ಲಿಯೇ ಇದ್ದ" ಎಂದು ಬೇಡಿ ಕೊಂಡರು. ಆ ಮೇಲೆ ನನ್ನ ಹೆಂಡತಿಯನ್ನು ಕರೆದು ಸಬ್ ಇನ್ಸ್ಪೆಕ್ಟರರ ಮೊದಲಿನ ಪ್ರಶ್ನೆಯೆಂದರೆ-'ನಿನಗೆ ನಿನ್ನ ಗಂಡ ಬೇಕೋ ಬೇಡವೋ?' ಎಂಬುದು! ಅವಳು ಗೋಳೋ ಎಂದು ಅಳಹತ್ತಿದಳು. ಅಳುತ್ತಾ 'ಯಾವುದೂ ಗೊತ್ತಿಲ್ಲ' ಎಂದಳು. "ಹ್ಞಾಂ! ಕಣ್ಣು ಕಟ್ಟು ಮಾಡುತ್ತೀಯಾ!" ಎಂದು ಪೋಲಿಸನು ತುಟಿಕಚ್ಚುತ್ತಾ ಎರಡು ಹೆಜ್ಜೆ ಮುಂದೆ ಹೋದ. ಪುಣ್ಯಕ್ಕೆ ನನ್ನ ಮನೆಯ ಹೆಂಗಸರಿಗೆ ಹೊಡೆಯಲಿಲ್ಲ. ಅಮ್ಮನನ್ನು ಮತ್ತು ಅವಳನ್ನು ಸಮಜಾಯಿಸಿ ನೋಡಿದರು-ಮಾತನಾಡಿಸಿ ನೋಡಿದರು-ಫಲವಿಲ್ಲ. ಕಡೆಗೆ ಪೋಲಿಸಿನವರು ಹಿತ್ತಿಲು, ಅಂಗಳದ ಮೂಲೆ ಮೂಲೆ ಎಲ್ಲಾ ಹೊಕ್ಕು ಹುಡುಕಿ ನೋಡಿದರು. ಯಾವ ಕುರುಹೂ ದೊರೆಯದಿದ್ದುದರಿಂದ ಅಲ್ಲಿಂದ ಸೀದಾ ಅಹಮ್ಮದನ ಮನೆಗೆ ತೆರಳಿತು ದಂಡು. ಅಲ್ಲಿಯೂ ಹೀಗೆಯೇ ಗದರಿಸಿ, ಹುಡುಕಿ, ಪ್ರಯೋಜನ ದೊರೆಯದೆ ಸೋಜನ ಮನೆಗೆ ಹೋದರು. ಎಲ್ಲಿ ಹೋದರೇನು? ಏನು ಮಾಡಿದರೇನು? ದಂಡಯಾತ್ರೆ ಹೊರಟದ್ದೇ ಬಂತು-ಏನೂ ಸಿಕ್ಕಲಿಲ್ಲ. ಇದ್ದರಲ್ಲವೇ ಸಿಕ್ಕುವದು? ಕಪ್ಪಕಾಣಿಕೆಯಾದರೂ ಸಿಗುವಕ್ರಮ! ಕೊಡುವವರಾರು--ಎಲ್ಲಿಂದ ಕೊಡುವದು? ಯಾಕೆ ಕೊಡಬೇಕು?

---



---

(೩೮ನೇ ಪುಟದಿಂದ)

ಮಾಡಿದೆ. ಸ್ತ್ರೀಧರ್ಮದ ಪಾಲನೆಯನ್ನು ಸಹ ಮಾಡುವೆ. ನಾನು ನನ್ನ ದೇಶದ ರಕ್ಷಣೆ ಮಾಡಿದೆ. ನನ್ನ ಕರ್ತವ್ಯವಿಂದು ಪೂರ್ತಿಯಾಯಿತು" ವೀರಮತಿಯು ಹೀಗೆ ಹೇಳುತ್ತ ಪತಿಯ ರಕ್ತದಿಂದ ಕೆಂಪಾಗಿದ್ದ ಖಡ್ಗವನ್ನು ಒಮ್ಮೆಲೇ ತನ್ನ ಹೃದಯದಲ್ಲಿ ಸೇರಿಸಿಕೊಂಡು ಬಿಟ್ಟಳು. ಇಬ್ಬರ ಪ್ರಾಣ ಪಕ್ಷಿಗಳೂ ಕೂಡಿಯೇ ಹೊರಟು ಹೋದವು.

ಆಹಾಹಾ! ವೀರಮತೀ ನಿಜವಾಗಿ ನೀನು ಧನ್ಯಳು. ಆದರ್ಶ ಆರ್ಯಾಂಗನೇ! ಅರ್ವಾಚೀನ ಭಾರತೀಯರೆದುರಿಗೆ ಒಂದೇ ಒಂದು ಸಲ ಬಂದು ನಿಲ್ಲಲಾರೆಯಾ?

# ದೊಡ್ಡಮ್ಮನ ದೂರದೃಷ್ಟಿ!

## ದೀಪಾವಳಿ ಉಡುಗೊರೆ ಕೊಟ್ಟು 'ಭಾಗ್ಯದೇವಿ'ಯೆಂದು ಹೇಳಿಸಿ ಕೊಂಡಳು.

ಲೇಖಕರು:
ಶ್ರೀ. ಕುಂಜೂರು ರಾಮಚಂದ್ರ ರಾಯರು

✠

ಹಗಲಿನ ಹೆಚ್ಚು ಸಮಯ ನಮ್ಮ ಆಫೀಸಿನಲ್ಲೇ ಕಳೆದು ಸಂಜೆಗೆ ಮನೆಗೆ ಬರುವ ವೇಳೆ ಬಾಡಿಗೆಯ ಕುದುರೆ ಮುಖಮಾಡಿಕೊಂಡು ಬರುತ್ತಿದ್ದ ತಾಲೂಕು ಶಿರಸ್ತೇದಾರ ದಿವಾಕರರಾಯನು ಇಂದು ನಸುನಗುತ್ತಾ ಮನೆಯನ್ನು ಪ್ರವೇಶಿಸುತ್ತಿದ್ದಾನೆ. ಅತಿಯಾಗಿ ಆನಂದವಾಗದೆ ದಿವಾಕರನು ನಗಲಾರನೆಂಬುದು ಅವನ ತಾಯಿ ಸೇತೂಬ್ಯಾಗೆ ಗೊತ್ತು. ಅಲ್ಲದೆ ಸುಶೀಲೆಯು ಬಾಣಂತಿತನಕ್ಕೆ ತೌರುಮನೆಗೆ ಹೋದಂದಿನಿಂದ ದಿವಾಕರನು ನಕ್ಕದ್ದು ಇದೇ ಮೊದಲು. ಆದುದರಿಂದ ವಿಚಾರಿಸಬೇಕೆಂಬ ಕುತೂಹಲ ಇದ್ದರೂ ದಣಿದು ಬಂದ ಮಗನಿಗೆ ಮೊದಲು ಒಂದಿಷ್ಟು ಕಾಫಿ ತಿಂಡಿಯನ್ನು ಕೊಟ್ಟು ಸಾವಕಾಶ ವಿಚಾರಿಸೋಣವೆಂದು ಅಡುಗೆ ಮನೆಗೆ ನಡೆದಳು.

ಚಿಕ್ಕಂದಿನಲ್ಲೆ ಪತಿ ವಿಯೋಗದ ದುಃಖವನ್ನು ಅನುಭವಿಸಬೇಕಾಗಿ ಬಂದಿದ್ದರೂ, ಮುತ್ತಿನಂತಹ ಮಗನಿಂದಾಗಿ ಸೇತೂಬ್ಯಾಗೆ, ಆ ದುಃಖವು ಮರವೆಯಾಗುತ್ತಿತ್ತು. ಗುಣಸಂಪನ್ನನಾದ ಮಗ, ಅಚ್ಚುಮೆಚ್ಚಿನ ಸೊಸೆ ಇರುವಷ್ಟರಲ್ಲಿ ಸೇತೂಬಾಯಿಗೆ ಸ್ವಗೃಹವು ಸ್ವರ್ಗಸಮಾನವಾಗುವುದರಲ್ಲಿ ಆಶ್ಚರ್ಯವೇನು? ಸೇತೂಬ್ಯಾಗೆ ಮಾತ್ರವಲ್ಲ, ಮನೆ ಮಂದಿಗೆಲ್ಲಾ ಅದೇ ರೀತಿ ಇತ್ತು. ಪಿತ್ರಾರ್ಜಿತವಾದ ಸ್ವಲ್ಪ ಜಮೀನು, ಪ್ರತಿ ತಿಂಗಳೂ ಕೈತುಂಬಾ ದೊರೆಯುವ ಪಗಾರ, ಚಿಕ್ಕದಾದರೂ ಚೊಕ್ಕವಾದ ಸಂಸಾರ. ಹೀಗಾಗಿ ಸದಾ ಸಂತೋಷವಾಗಿದ್ದ ದಿವಾಕರ.



"ಏನೋ ಇದು, ಬಟ್ಟೆಸೂ ಬದಲಾಯಿಸದೆ, ಆ ಕೊಳಕು ಆಫೀಸು ಮೈಲಿಗೆಯಲ್ಲೇ ಅಡುಗೆ ಮನೆಯ ವರೆಗೂ ಬರೋದೋ?" ಗರ್ಜಿಸಿದಳು ದೊಡ್ಡಮ್ಮ!

ಸದಾಚಾರ ಸಂಪನ್ನನಾಗಿದ್ದ ದಿವಾಕರನು ಇಂದು ಸಂತೋಷದ ಭರದಲ್ಲಿ ಆಫೀಸಿನ ಬಟ್ಟೆಬರೆಗಳನ್ನು ಬದಲಿಸದೆ—ಕೈ ಕಾಲು ಮುಖ ಕೂಡಾ ತೊಳೆದುಕೊಳ್ಳದೆ "ಅಮ್ಮಾ" "ಅಮ್ಮಾ" ಎನ್ನುತ್ತಾ ನೆಟ್ಟಗೆ ಅಡುಗೇಮನೆಯನ್ನು ಹೊಕ್ಕನು. ಎಂದೂ ಇಲ್ಲದ ಇಂದಿನ ಬದಲಾವಣೆಯನ್ನು ನೋಡಿ ಆಶ್ಚರ್ಯದಿಂದ "ಏನೋ ಇದು ಬಟ್ಟೆಯನ್ನೂ ಬದಲಾಯಿಸದೆ, ಆ ಕೊಳಕು ಆಫೀಸು ಮೈಲಿಗೆಯಲ್ಲೇ ಅಡುಗೇಮನೆಯ ವರೇಗೂ ಬರೋದೇ."

ದಿವಾಕರ:—(ನಗುತ್ತಾ) ಇಲ್ಲಮ್ಮ ಏನೋ ತಪ್ಪಿ ಬಂದು ಬಿಟ್ಟೆ. ಕ್ಷಮಿಸು. ಆದರೆ ನಾನು ಈ ಹೊತ್ತು ಒಂದುದಿನ ಬಂದ ಮಾತ್ರಕ್ಕೆ ಮಡೀ ಮೈಲಿಗೇಂತಾ ಬಡ್ಕೊಂಡೀಯಲ್ಲಾ; ಇನ್ನು ಮುಂದೆ ದಿನಕ್ಕೊತ್ತು ಬಾರಿ ಸ್ನಾನಮಾಡ್ತೀಯೋಂತ ಮಾತ್ರ ನೋಡಬೇಕು.

ಸೇತೂಬ್ಯಾ:— ಏನು ನಿನ್ನ ಬೀಗರ ಕಾಗದಾ ಗೀಗದಾ ಏನಾದರೂ ಬಂದಿದೆಯೊ? ಸುಶೀಲನ ಹೆರಿಗೆ ಸುಖವಾಗಿ ಆಗಿದೆ ತಾನೆ. ಎಲ್ಲಿ ಕೊಡು.

ದಿವಾಕರನು ನಗುತ್ತಾ ಆಗ ತಾನೆ ಅವನ ಮಾವನಿಂದ ಬಂದಿದ್ದ ಪತ್ರವನ್ನು ತಾಯಿಯ ಕೈಗೆಕೊಟ್ಟು ಬಟ್ಟೆ ಬದಲಾಯಿಸ

ಲಕ್ಕೆಂದು ತನ್ನ ಕೊಠಡಿಗೆ ಹೋದನು

ಮೊಮ್ಮಗನ ಜನನ ವಾರ್ತೆಯನ್ನು ಓದಿದ ಸೇತೂಬಾಯಿಯು ಉಕ್ಕಿಬರುತ್ತಿರುವ ಸಂತೋಷದಿಂದ ಮಗನ ಕಾಫಿ ತಿಂಡಿಯ ಯೋಚನೆ ಕೂಡಾ ಇಲ್ಲದೆ ಹೊಸ ಮೊಮ್ಮಗನಿಗೆ ದೀಪಾವಳಿಗೆ ಏನನ್ನು ಉಡುಗರೆ ಕೊಡುವುದೆಂದು ಆಲೋಚಿಸುತ್ತಾ ಅಡುಗೆಮನೆಯ ಜಗುಲಿಯಲ್ಲೇ ಕುಳಿತುಬಿಟ್ಟಳು. ಪುತ್ರೋತ್ಸವದಿಂದಾಗಿ ಸಂತೃಪ್ತನಾಗಿದ್ದರೂ ತುಂಬಾ ಹಸಿದಿದ್ದ ದಿವಾಕರನು. ಬಟ್ಟೆಯನ್ನು ಬದಲಾಯಿಸಿ ಕಾಫಿಯನ್ನು ಹುಡುಕಾಡುತ್ತಾ ಅಡುಗೆಮನೆಗೆ ಬಂದನು. ತಾಯಿಯ ದೀರ್ಘಾಲೋಚನೆಯನ್ನು ನೋಡಿ ಮಾತಿಗೆ ಮೊದಲು ಮಾಡಿದನು.

ದಿವಾಕರ:— ಎಂಥಾದ್ದಮ್ಮ ಇಷ್ಟು ದೊಡ್ಡ ಆಲೋಚನೆ?

ಸೇತೂಬ್ಯಾ:— ಹೆಂಗಸರು — ನಾವು ಯೋಚಿಸೋದೇನು ಬಂತು? ಮಹಾ ವಿಶೇಷವೇನೂ ಇಲ್ಲ. ನಮ್ಮ ''ಮರಿದಿವಾಕರ''ನಿಗೆ ಈ ದೀಪಾವಳಿಗೆ ಏನು ಉಡುಗೊರೆ ಕೊಡಲೀಂತ-ಅಷ್ಟೇ.

ದಿವಾಕರ:—ಅದಕ್ಕೇನಾಗಬೇಕು. ನಿನ್ನ ಹತ್ತಿರ ಇರುವ ಹಣದಲ್ಲಿ ಒಂದಿನ್ನೂರೋ ಅಲ್ಲ ನಾನ್ನೂರೋ ಅವನಿಗೇಂತ ನನ್ನ ಕೈಲಿ ಕೊಟ್ಟುಬಿಡು—ಆವಾಗ ಎಲ್ಲಾ ಸರಿ ಹೋಗುತ್ತೆ.

ಸೇತೂಬ್ಯಾ:— ಪರವಾ ಇಲ್ಲ, ಬಲೇ ಘಾಟಿ ಇದ್ದೀ ನೀನು! ಏನು ಮೋಟರ್ ಕಾರು ತೆಗೆದುಕೊಳ್ಳಲಿಕ್ಕೆ ಅಷ್ಟು ಹಣ ಕಮ್ಮಿ ಬಿದ್ದಿದೇಂತ ಕಾಣುತ್ತೆ. ಅಲ್ಲವೇನು.

ದಿವಾಕರ:— ಛೇ ಛೇ ಹಾಗಲ್ಲಮ್ಮ.

ಸೇತೂಬ್ಯಾ:— ಮತ್ತೇಗೆ ಮಗೂ.

ದಿವಾಕರ:— ನೋಡು. ಈಗಿನ ಕಾಲ ಮಗುಚಾಟ ಮಾಡುವ ಬ್ಯಾಂಕುಗಳಲ್ಲಿಡೋದೇನು ಸುಖವಲ್ಲ. ಆದರಲ್ಲೂ ಬಡ್ಡಿದರ ಬಹಳ ಇಳಿಸಿಬಿಟ್ಟಿದ್ದಾರೆ.

ಸೇತೂಬ್ಯಾ:— ಆದ್ದರಿಂದ ನೀನು ಅದನ್ನು ಮೋಟಾರಿಗೆ ಉಪಯೋಗಿಸ ಬೇಕು. ಅಲ್ಲವೇ.

ದಿವಾಕರ:— ಸುಮ್ಮನೆ ಹೊಳಿಟ್ಟ ಹಾಗೆ ಪೆಟ್ಟಿಗೆಯೊಳಿಟ್ಟು ಆಗುವ ಉಪಕಾರವಾದರೂ ಏನು.

ಸೇತೂಬ್ಯಾ:— ಆದಕ್ಕೇ ನಾನೊಂದು ಹೊಸ ದಾರಿಯನ್ನು ಕಂಡುಹಿಡಿದಿದ್ದೇನೆ.

ದಿವಾಕರ: – ಅದೇನು.?

ಸೇತೂಬ್ಯಾ:— ಉಡುಪಿಯಲ್ಲಿ ಸಪ್ಲೈ ಏಜನ್ಸಿ ಸಂಸ್ಥೆಯ ಫೈನಾನ್ಸು ಡಿಪಾರ್ಟುಮೆಂಟಿನಲ್ಲಿ ಒಂದು ಅಂತರಂಗ ಡಿಪಾಜಿಟನ್ನು ಮಾಡುವುದೆಂದು.

ದಿವಾಕರ:— ಮೊಮ್ಮಗನಿಗೆ ಅಂತರಂಗ ಡಿಪೋಜಿಟು ಮಾಡುವಾಗ ನಿನ್ನ ಮಗನಿಗೆ ಒಂದು ಬಹಿರಂಗ ಡಿಪೋಜಿಟನ್ನು ಉಡುಗರೆ ಮಾಡಬಹುದಲ್ಲಾ.

ಸೇತೂಬ್ಯಾ:— ನೋಡು ನೀನು ಉದ್ಯೋಗಕ್ಕೆ ಸೇರಿದಾಗಲೇ ನಾನು ನಿನ್ನ ಹೆಸರಿನಲ್ಲಿ ಒಂದು **ಇಂಡಸ್ಟ್ರಿಯಲ್ ಡಿಪೋಜಿಟಿಗೆ** ಸೇರಿರುತ್ತೇನೆ. ಈಗ ಅದು ಬೆಳೆದು ಒಂದು ಚಿಕ್ಕ ಗಂಟಾಗಿದೆ. ಆ ಮೇಲೆ ನಿನ್ನ ಮದುವೆ ಸಮಯ ನಿನಗೆ ಒಂದು ನೂರು ರೂಪ್ಯಾಗಳ **ಇಂಡಸ್ಟ್ರಿಯಲ್ ಕ್ಯಾಶ್ ಸರ್ಟಿಫಿಕೇಟ**ನ್ನು ಉಡುಗರೆ ಮಾಡಿರುತ್ತೇನೆ. ಬರುವ ತಿಂಗಳಲ್ಲಿ ನಿನಗೆ ಆ ಹಣ ಸಿಗುವುದು. ಅಲ್ಲದೆ ಸುಶೀಲೆಯ ಹೆಸರಲ್ಲಿ **''ಸೇವ್ ಏಸ್ ಯು ಪ್ಲೀಸ್''** ಎಂಬ ಅತ್ಯುತ್ತಮ ಯೋಜನೆಗೂ ಸೇರಿರುತ್ತೇನೆ. ಇಷ್ಟೆಲ್ಲಾ ಉಡುಗೊರೆಗಳನ್ನು ಕೊಟ್ಟೂ ಇನ್ನೂ ಉಡುಗೊರೆ ಅಂದರೆ.

ದಿವಾಕರ:— ಹಾಗಾದರೆ ನನಗೆ ಬರೇ ದೀಪಾವಳಿ ಮಾತ್ರವೇ.

ಸೇತೂಬ್ಯಾ:— ಛೆ. ಛೆ. ಅಂತರಂಗ ಡಿಪೋಜಿಟಾಗಿ ಒಂದು ನೂರು ರೂಪಾಯಿಗಳನ್ನು ಇಟ್ಟರೆ ಸೇಕಡಾ ೪ರ ಸಲೆ ಬಡ್ಡಿಯೂ ದೊರೆಯುವುದಲ್ಲದೆ ''ಅಂತರಂಗ''ದ ಪ್ರತಿಗಳು ಪುಕ್ಕಟೆಯಾಗಿ ಪ್ರತಿ ವಾರವೂ ನಮಗೆ ಸಿಗುವುವು. ಹಣವು ಭದ್ರತೆಯಾಗಿದ್ದುಯೋಗ್ಯದರದ ಬಡ್ಡಿ ದೊರಕುವ ಉಡುಗೊರೆಯು ಮರಿದಿವಾಕರನಿಗಾಯಿತು. ಉತ್ತಮ ತರಗತಿಯ ವಾರಪತ್ರಿಕೆಯೊಂದು ಪ್ರತಿ ವಾರವೂ ನಿನ್ನ ಮೇಜನ್ನಲಂಕರಿಸುವುದು ನಿನಗೊಂದು ಉಡುಗೊರೆಯಾಯಿತು.

ದಿವಾಕರ:— ಆದೆಲ್ಲಾ ಖರೆ. ಆದರೆ ಆ 'ಸಪ್ಲೈ ಏಜನ್ಸಿ' ಸಂಸ್ಥೆಯು ಅಷ್ಟು ಭದ್ರವಾದ ಸಂಸ್ಥೆಯೇ.

ಸೇತೂಬ್ಯಾ:— ಭದ್ರವೋ ಅಭದ್ರವೋ ನಾನರಿಯೆ. ಇದು ವರೆಗೆ ಜನಪ್ರೀತವಾಗಿ ನಡೆದುಕೊಂಡು ಬಂದಿದೆ. ಅಲ್ಲದೆ ಶ್ರೀ ಭಾರತ ವಸ್ತು ಮಂದಿರ, ಮಣಿಪಳ ಪವರ್‌ಪ್ರೆಸ್, ತುಳುನಾಡು ಛಾಪಖಾನೆ, ಅಂತರಂಗ, ತುಳುನಾಡು ಸ್ಟೇಶನರಿ ಮಾರ್ಟು ಇತ್ಯಾದಿಗಳ ಸ್ವಾಮಿತ್ವವುಳ್ಳ ಆ ಸಪ್ಲೈ ಏಜನ್ಸಿ ಸಂಸ್ಥೆಯನ್ನು ವಿಚಕ್ಷಣ ಡ್ಯಾರೆಕ್ಟರರ

ಸಹಕಾರದಿಂದ ದೇಶಭಕ್ತ ಯಸ್. ಯು. ಪಣಿಯಾಡಿಯವರು ಯೋಗ್ಯ ರೀತಿಯಿಂದ ನಡೆಸಿಕೊಂಡು ಬರುತ್ತಾರೆ. ಸಮಸ್ತ ಕರ್ಣಾಟಕಕ್ಕೇನೇ ಒಂದು ಆದರ್ಶ ಜನಪ್ರೀತವಾಗಿರುವ ಸಪ್ಲೈ ಏಜನ್ಸಿ ಸಂಸ್ಥೆಗೆ ಸರ್ವತೋಪರಿ ಜನ ಸಹಾನುಭೂತಿ ಇರುವುದರಿಂದ ಬೇರಾವ ತರದ ಭದ್ರತೆಯೂ ಬೇಕಾಗಿಲ್ಲವೆಂದು ನನ್ನಭಾವನೆ. ಓದು ಬರಹ ಬಲ್ಲವ ನೀನು. ಅವರ ವಾರ್ಷಿಕ ವರದಿಯನ್ನು ತರಿಸಿ ನೋಡಿದೆಯಾದರೆ ಎಲ್ಲಾ ಮಂದಟ್ಟಾಗುವುದು.

ದಿವಾಕರ:—ಇಷ್ಟು ವಿಚಾರಗಳೂ ನನಗೆ ತಿಳಿದೇ ಇರಲಿಲ್ಲವಲ್ಲಾ!

ಸೇತೂಬ್ಯಾ:— ಹೇಗೆ ತಿಳಿಯಬೇಕು. ಹಟ್ಟಿಯಲ್ಲಿ ಕಟ್ಟಿರುವ ದನಕರುಗಳಂತೆ ಮನೆಯಿಂದ ಆಫೀಸಿಗೆ ಆಫೀಸಿನಿಂದ ಮನೆಗೆ ಹೋಗುವುದಷ್ಟನ್ನುಮಾತ್ರವೇ ಬಲ್ಲ ನಿಮಗೆ ನಮ್ಮೂರ ವಿಚಾರವಾದರೂ ಹೇಗೆ ತಿಳಿಯಬೇಕು!

ದಿವಾಕರ:— ಅಮ್ಮಾ, ನಿನಗ್ಯಾರಮ್ಮಾ ಈ ವಿಷಯ ತಿಳಿಸಿದ್ದು.

ಸೇತೂಬ್ಯಾ:— ಯಾರು ಯಾಕೆ ತಿಳಿಸಿಬೇಕು. ನನಗೇನು ಕಣ್ಣಿಲ್ಲವೇ. ನಾನು ಮೊನ್ನೆ ಶ್ರೀಕೃಷ್ಣ ದರುಶನಕ್ಕೆ ಉಡುಪಿಗೆ ಹೋದಾಗ ಕೂಡ ಎಲ್ಲಾ ವಿಚಾರಿಸಿ ನೋಡಿಕೊಂಡು ಬಂದಿದ್ದೇನೆ.

ದಿವಾಕರ:-ಬಲ್ ಘಾಟಿಯಮ್ಮಾ ನೀನು! ನಿನ್ನನ್ನು ಬರೇ ಒಬ್ಬ ಹೆಂಗಸು, ನನ್ನ ತಾಯಿ – ಅಂತ ಮಾತ್ರ ತಿಳಿದಿದ್ದೆ ಇದು ವರೆಗೆ- ಈಗ ನೋಡಿದರೆ ನೀನು ನನ್ನ ಭಾಗ್ಯದೇವಿ.' – ಎಂದು ಉದ್ದಂಡ ನಮಸ್ಕರಿಸುವನು—ತಾಯಿಯು ಮಗನನ್ನೆತ್ತಿ- "ಹರಟೆ ಹೊಡೆಯುತ್ತಾ ನಿನ್ನ ಕಾಫಿಗೆ ಚಕ್ಕರ್ ಬಿತ್ತಲ್ಲೋ- ಎಲ್ಲಾ ಆರಿಯೋಯಿತು-ಇರು, ಬೇರೆ ಕೊಂಚ ತಯಾರಿಸಿ ಕೊಡುತ್ತೇನೆ" ಎಂದು ಒಳಗೆ ಹೋದಳು. ದಿವಾಕರನು ಏನನ್ನೊ ಯೋಚಿಸುತ್ತಾ ಜಗಲಿಯಲ್ಲೆ ಕುಳಿತಿದ್ದನು. ಮನಸ್ಸಿನಲ್ಲಿ ಆಲೋಚನೆಗಳು ಹೊಳೆದಂತೆ ಬಾಯಿಯಲ್ಲೂ ಅನಿರೀಕ್ಷಿತವಾಗಿ 'ಮನೆಗೊಂದು ಮುದುಕಿ--- ಎಂಬುದು ವೇದವಾಕ್ಯ. ಛಲೋ ಹಂಚಿಕೆ- ವಳ್ಳೇ ಉಡುಗೊರೆ" ಎಂಬ ಮಾತುಗಳು ಹೊರಬಿದ್ದುವು-

ವಾಚಕವೃಂದ! ಹೇಗಿದೆ ಮುದುಕಿಯ ದೀಪಾವಳಿ ಉಡುಗರೆ?

---

# ಈ ವಾರದ ಪಂಚಾಂಗ

ಬಹುಧಾನ್ಯ ಸಂ|ರದ ಕಾರ್ತಿಕ ಶುಕ್ಲ-ಕೃಷ್ಣಪಕ್ಷ ದಕ್ಷಿಣಾಯನಂ

ತುಲಾ (ಬೊಂತೆಲ್) ೨೦ರಿಂದ ೨೬ರ ವರೆಗೆ. ಮಹಾನಕ್ಷತ್ರ-ವಿಶಾಖಾ. ನವಂಬರ, ೧೯೪೮.

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 6 | ೧೩ | ರ\|\|\|ಘ ೫೮\|\| | ರೇ೧೯\|\|\| | ವ೧೯\| | ತೈ\|\|\| | ೦ | ೧೩\|\|\| | ವಿಶಾಖಾರ್ಕಃ೧೩ ಮೇಷೇಚ೧೯\|\|\|§ [§ಅ್ನ೨ಬು೧೭ಅ್ನ೨ವಶು೧೩ವ್ಯ.೧೪ |
| 7 | ೧೫ | ಚ೫೭\|\|\| | ಅ್ವ೧೯\|\| | ಸಿ೧೫ | ಭ೨೮ | ೯\|\|\| ವಿ೪೩ | ೧\|\|\| | ಮನ್ವಾ.ಕಾ.ಸ್ನಾನಸಂ ○ ಪೂ.† |
| 8 | ೧ | ಕು೫೩\| | ಭ೧೮\|\| | ವ್ಯ೯\|\|\| | ಬಾ೨೫ | ೪೭\|\| | ೬\|\|\| | ವೃಷಭೆಚ೩೩ಅ್ನ೩ಬು೪೪ವಮಾ. ನಿ.† |
| 9 | ೨ | ಬು೪೯ | ಕೃ೧೬\| | ವ೪೪ಘ ೫೩\| | ತೈ೨೧ | ೫೪ | ೧೦\|\| | ವಿ೨ರ೩೨ಹಸ್ತ೩ಕು೨೨ಚಾತುರ್ಮಾ.೨ |
| 10 | ೩ | ಗು೪೪ | ರೋ೧೩\| | ಶಿ೫೦\| | ವ೬\|\| | ೨೬\|\| | ೫\|\|ಅ೪೯\| | ಮಿಥುನೆಚ೪೧\|\|ನಾಶಯೋಗಃರೋ. [†ವ್ಯಾಸಪೂ೨೨ಚಂದ್ರಗ್ರಹಣಂ |
| 11 | ೪ | ಶು೩೮\|\| | ಮೃ೯\|\|\| | ಸಿ೪೨\|\|\| | ಬ೧೧\| | ೨೯\|\| | ೪೨\|\| | ಅ್ನ೪ಬು೧೯ಸಂಕಷ್ಟಹರಃಪ್ರದೋ. |
| 12 | ೫ | ಶ೩೨\|\| | ಆರ್೬ | ಸಾ೩೫ | ಕೌ೫\|\| | ೩೪ | ೫೬\| | ವಿ೩ರ೫೦ಕರ್ಕಟೇಚ೪೮ [†ಕೇಶವಃ |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 6 | ೧೩ | ರ\|\|ಘ ೫೬\|\| | ರೇ೧೮\| | ವ್ರ೧೭\| | ತೈ\|\| | ೦ | ೧೨\| ಅ೫೯\|\| | ವಿಶಾಖಾರ್ಕಃ೨ಮೇಷೇಚ೧೮\| ಅ್ನ* [*೨ಬು೪೨ವ್ಯೈಕುಂಠ೧೪ |
| 7 | ೧೫ | ಚ೫೩\|\| | ಅ್ವ೧೬\|\| | ಸಿ೧೧\|\|\| | ಭ೨೫\|\| | ೭\|\| ವಿ೩೯ | ಶೆ.೩\| | ಕುಂಭೆಗುರುಃ೧ಮನ್ವಾದಿಃತ್ರಿಪು† |
| 8 | ೧ | ಕು೪೮\| | ಭ೧೪ | ವ್ಯ೫\| ಘ ೫೨\|\|\| | ಬಾ೨೧ | ೪೨\| | ೨\|\|\| | ವೃಷೆಚ೨೮ ಅ್ನ೩ಬು೫೮ [†ರೋತ್ಸವಃ ○ ಪೂ. ಚ.ಗ್ರಹಣ |
| 9 | ೨ | ಬು೪೨\| | ಕೃ೧೦\|\| | ವ೫೦ | ತೈ೧೫\| | ೪೭\| | ೪\|\|ಅ೫೮\|\| | ವಿ೨ರ೨೨ ಹ೩ಕು೩೨ ಅ್ನ೨ವಶು೩ |
| 10 | ೩ | ಗು೩೫\|\|\| | ರೋ೬ | ಶಿ೪೧\|\|\| | ವ೯ | ೧೮\|\|\| | ಶೆ೨\|ಅ೪೧ | ಮಿಥುನೆಚ೩೩\|\| |
| 11 | ೪ | ಶು೨೯\| | ಮೃ೧ಘ ೫೫\| | ಸಿ೩೩\|\| | ಬ೨\|\| | ೧೦\|\|\| | ೩೩\| | ಅ್ನ೪ಬು೨೦ಸಂಕಷ್ಟಃ [†ನಿ೩೧ |
| 12 | ೫ | ಶ೨೨\|\|\| | ಪ್ನು೫೧\|\|\| | ಸಾ೨೫\| | ತೈ೨೨\|\|\| | ೨೪ | ೪೬\| | ವಿ೩ರ೪೧ಕರ್ಕಟಕೆಚ೩೧ವೈಪ್ರು‡ |

# ಈ ವಾರದಲ್ಲಿ ನಿಮ್ಮ ಗ್ರಹಗತಿ ಹೇಗಿದೆ?

ವಾರದ ಭವಿಷ್ಯ.

ತಾ. ೬-೧೧-'೩೮ರಿಂದ ತಾ. ೧೨-೧೧-'೩೮ರ ವರೆಗೆ.

**ಮೇಷ:—**

ಅನೇಕ ಸಮಯದಿಂದ ನಿಮ್ಮಲ್ಲಿ ಬೆಳೆಯುತ್ತಿದ್ದ ಕಲಹವು ನಿವೃತ್ತಿಯಾದರೂ ನಿಮ್ಮ ಮನಸ್ಸಿಗೆ ನೆಮ್ಮದಿಯಿಲ್ಲವು. ಮನೋರೋಗವು ಪ್ರಬಲವಾಗಿ ಪೀಡಿಸುತ್ತಿರುವುದು. ಶರೀರಪ್ರಕೃತಿಯು ಕೆಟ್ಟು ಬಹಳ ಕಷ್ಟಕ್ಕೆ ಗುರಿಯಾಗುವಿರಿ. ದೇಶಾಟನದಲ್ಲಿರುವವರಿಗೆ ತುಂಬಾ ಗಂಡಾಂತರಗಳು ಒದಗುವವು. ಆದರೂ ನಿಮ್ಮ ಭಾಗಕ್ಕೆ ಲಕ್ಷ್ಮಿಯ ದೃಷ್ಟಿಯಿರುವುದರಿಂದ ಅನೇಕ ರೀತಿಯಲ್ಲಿ ನಿಮ್ಮ ಖರ್ಚಿಗೆ ಬೇಕಾದಷ್ಟುಹಣವನ್ನು ಸಂಪಾದಿಸುವಿರಿ. ಕೋರ್ಟು ಕಛೇರಿಯ ಕಾರ್ಯಗಳಲ್ಲಿಯೂ ಇತರ ವ್ಯವಹಾರಿಕ ಕೆಲಸಗಳಲ್ಲಿಯೂ ನಿಮಗೆ ಯಶೋಲಾಭವಿರುವುದು. ಈ ವಾರದಲ್ಲಿ ನೀವು ಅಜಾತ ಶತ್ರುಗಳಾಗಿರುವಿರಿ. ಸಾಂಸಾರಿಕ ಭಾಗವು ಉತ್ತಮ ರೀತಿಯಲ್ಲಿರುವುದು. ತಾ ೭, ೮, ೧೧, ೧೨ರಲ್ಲು ಇಷ್ಟಕಾರ್ಯಸಿದ್ಧಿ, ಸ್ತ್ರೀಸುಖ, ಅಶನವಸನಧನಾದಿಗಳ ಲಾಭವಾಗುವುದು.

**ವೃಷಭ:—**

ನಿಮಗೀ ವಾರದಲ್ಲಿ ಅನಿಷ್ಟಗಳೇ ಹೆಚ್ಚಾಗಿ ಸಂಭವಿಸಲಿವೆ. ನಿಮ್ಮ ಕೈಕೆಳಗಿನ ಜನರಿಗೂ ನಿಮಗೂ ಮನಸ್ತಾಪವುಂಟಾಗಿ ನಿಮ್ಮಿಂದವರು ದೂರವಾಗುವರು. ಸಂಸಾರದಲ್ಲಿ ದಿನೇ ದಿನೇ ಕಲಹವು ಪ್ರಬಲವಾಗುತ್ತಾ ಬರುವುದು. ರೋಗಬಾಧೆಯು ಅಧಿಕವಾಗಿ ಶರೀರದ ಬಣ್ಣವು ಮಾರ್ಪಾಟಾಗುವುದು. ಅನೇಕ ರೀತಿಯಿಂದ ನೀವು ಹಣ ಸಂಪಾದಿಸಿದರೂ ಕೈಯಲ್ಲಿ ಒಂದು ಚಿಕ್ಕಾಸೂ ಉಳಿಯಲಾರದು. ಆದರೂ ನೀವು ಆತ್ಮ ಬಲದಿಂದಲೇ ಕೈಗೊಂಡ ಕಾರ್ಯಗಳನ್ನು ಕೊನೆಗಾಣಿಸುವಿರಿ. ಮಾತ್ರವಲ್ಲ ಜನರಿಂದ ಮಾನಾದರಗಳನ್ನು ಹೊಂದುವಿರಿ. ತಾ. ೭, ೮, ೧೦, ೧೨ರ ದಿನಗಳು ಪ್ರತಿಕೂಲವಾಗಿರುವುವು. ಕೈಗೊಂಡ ಕಾರ್ಯಗಳಿಗೆ ವಿಘ್ನಗಳು ಅಧಿಕವಾಗಿ, ಧನವ್ಯಯವು ಅತಿರೇಕವಾಗುವುದು.

**ಮಿಥುನ:—**

ಶುಭಸ್ಥಾನಾಪನ್ನರಾದ ಬುಧಗುರುಗಳೂ ಕೂಡ ಗುರ ಶನಿಗಳಿಂದ ವಿದ್ಧರಾದ ಪ್ರಯುಕ್ತ ಆವನೊಬ್ಬ ಗ್ರಹನ ಅನುಗ್ರಹವೂ ನಿಮ್ಮ ಮೇಲಿರುವುದಿಲ್ಲ. ಆದ್ದರಿಂದಲೇ ನಿಮ್ಮ ಖರ್ಚಿಗೆ ತುದಿಮೊದಲಿಲ್ಲವು. ವೃದ್ಧಿ ಹೊಂದಿದ ಶತ್ರುಗಳ ಪೀಡೆಯು ದಿನೇ ದಿನೇ ಹೆಚ್ಚುವುದು. ಯಾವ ಕಾರ್ಯಗಳಲ್ಲಿಯೂ ಜಯಸಿಗಲಾರದು. ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಿಗೆ ಮುಖ್ಯಸಾಧನಾಭೂತವಾದ ಶರೀರವೇ ಕೆಟ್ಟ ಮೇಲೆ ಬೇರೆ ಕೇಳಬೇಕಿಲ್ಲ. ಸಂಸರ್ಗದೋಷಗಳಿಂದಾಗಿ ಅವಮಾನ,ತಿರಸ್ಕಾರಗಳು ಹೆಚ್ಚುದವು ಆಪತ್ತುಗಳು ಮುಗಿಯುವದೆಂತಲೇ ಇಲ್ಲವು. ಇವೆಲ್ಲವುಗಳಿಗೆ ಸರಿಯಾಗಿ ನಿಮ್ಮ ಮನಸ್ಸು ಕೂಡ ಬಹಳ ಚಂಚಲವಾಗಿದ್ದು ದುಷ್ಕಾರ್ಯಗಳಿಗೇನೇ ಹೆಚ್ಚಾಗಿ ಪ್ರೇರೆಪಿಸುವದು. ತಾ.೯, ೧೦ ಈ ದಿನಗಳು ಅತ್ಯಂತ ಹಾನಿಕರಗಳಾಗಿವೆ.

**ಕರ್ಕಾಟಕ:—**

ಆರ್ಥಿಕ ಭಾಗವು ಬಹ್ವಂಶ ಸುಧಾರಣೆಯಾಗಿರುವುದು. ಎಲ್ಲರ ಧನವನ್ನು ಅಪಹರಿಸುವ ಕಳ್ಳ ಜನರಿಂದಲೂ ನೀವು ಧನವನ್ನು ಸೆಳೆಯುವಿರಿ. ಅಂದ ಮೇಲೆ ನಿಮ್ಮ ಸು ಕಳ್ಳರ ಕಳ್ಳರೆಂದರೂ ತಪ್ಪಾಗದು. ಗೃಹಸುಖವು ಚೆನ್ನಾಗಿರುವುದು. ಧರ್ಮಕಾರ್ಯಗಳ ಸಲುವಾಗಿ ಧನ ವ್ಯಯಿಸುವಿರಿ. ಆದರೂ ಕೆಲವು ಗ್ರಹರು ಅನಿಷ್ಟಸ್ಥಾನಗತರಾಗಿದ್ದು ನಿಮ್ಮ ಮೇಲೆ ಮುನಿದಿರುವುದರಿಂದ ನಿಮ್ಮ ಮನೋರಥವನ್ನು ಸಾರ್ಥಕಗೊಳಿಸಲಾರರು. ಮಾನಹಾನಿಯ ಪ್ರಸಂಗಬರುವುದು ಪತ್ನೀಪುತ್ರರಲ್ಲುಂಟಾ ಮನೋವೈಷಮ್ಯವು ಸಂಸಾರದಲ್ಲಿ ಜಿಗುಪ್ಸೆಯನ್ನು ತೋರುವುದು. ವರ್ಣಾಶ್ರಮೋಚಿತವಾದ ಧರ್ಮವು ನಿಮ್ಮಲ್ಲಿಲ್ಲವು. ಆದ್ದರಿಂದಲೇ ಕೆಲವರು ನಿಮ್ಮ ವಿರೋಧಿ ಪಕ್ಷಕ್ಕೆ ಸೇರಿಹರು. ಅಂತೂ ಖರ್ಚಿನ ಸಲುವಾಗಿ ಹೆರವರ ಕೈನೋಡಬೇಕಾಗಿಲ್ಲ. ದೈಹಿಕ ಸುಖವೂ ಮಾನಸಿಕ ಸುಖವೂ ಉಳಿಯಲಾರದು. ತಾ. ೭ರಿಂದ ೧೦ರ ವರೆಗಿನ ದಿನಗಳಲ್ಲಿ ಮಿತ್ರಲಾಭ, ಇಷ್ಟಕಾರ್ಯಸಿದ್ಧಿಯ ಯೋಗವಿದೆ.

**ಸಿಂಹ:—**

ಅಧಿಕಾರಿ ಜನಗಳಿಂದ ಹೆಚ್ಚಿನ ಪೀಡೆಯೂ, ಕೋರ್ಟು ಕಛೇರಿ ಮುಂತಾದುವುಗಳಲ್ಲಿನ ಕಾರ್ಯಗಳಲ್ಲಿ ಧನವ್ಯಯವೂ ಮಿತಿಮೀರಿ ಆಗುವುದು. ನೀವು ಯಾವ

ಕಾರ್ಯದಲ್ಲೂ ಮುಂದಾಳಾಗಿ ಕೆಲಸಮಾಡಬೇಡಿ "ಮುಖ ರಸ್ತತ್ರ ಹನ್ಯತೇ" ಎಂಬಂತೆ ಮುಖಂಡರೇ ಹೆಚ್ಚಾಗಿ ಪೀಡೆಗೊಳಗಾಗುವುದರಿಂದ ನೀವು ಅಪರಾಧಿಗಳಾಗಿ ಗಣಿಸಲ್ಪಡುವಿರಿ. ದೇಹದ ಆರೋಗ್ಯವು ಶಿಥಿಲವಾಗುವುದು. ಆದರೂ ಶತ್ರುನಾಶವಾಗಿ ಮಿತ್ರವೃಂದದಿಂದನುವೃತರಾದ ನಿಮಗೆ ಕಾರ್ಯಗಳಲ್ಲಿ ಜಯವೂ ಧನ ಲಾಭವೂ ಆಗುವುದು. ಕಾರ್ಯಾಕಾರ್ಯ ವಿಚಾರಣಾ ಶಕ್ತಿಯು ನಿಮ್ಮಲ್ಲಿ ವೃದ್ಧಿಯಾಗುವುದು. ಆದ್ದರಿಂದಲೇ ಕೆಲವರಿಂದ ನೀವು ಗೌರವವನ್ನು ಪಡೆಯುವಿರಿ. ತಾ. ೬, ೭, ೮ ಈ ದಿನಗಳಲ್ಲಿ ಉದರ ಶೂಲೆ, ಆಕಸ್ಮಿಕ ತೊಂದರೆಗಳು ಅಧಿಕವಾಗುವವು.

**ಕನ್ಯಾ:—**

ನಿಮಗೆ ಕೆಲವೊಂದು ಕಾರ್ಯದಲ್ಲಿ ಧನಲಾಭವಾಗುವ ಸಂಭವವಿದೆ. ಆದರೆ ಈ ಕಾಲಗತಿಗನುಗುಣವಾಗಿ ನೀವು ನ್ಯಾಯಮಾರ್ಗವನ್ನು ಬಿಡಬೇಕಾಗುತ್ತದೆ. ಯಾಕಂದರೆ "ಆರ್ಜವಂ ಹಿ ಕುಟಿಲೇಷು ನ ನೀತಿಃ" ಎಂದಿದೆ. ಅಂದರೆ ವಕ್ರಬುದ್ಧಿಯ ಜನರೊಡನೆ ವ್ಯವಹಾರ ಮಾಡುವಾಗ ನಾವೂ ಕೂಡ ವಕ್ರವಾಗಿಯೇ ಇರಬೇಕು. ನ್ಯಾಯಮಾರ್ಗವನ್ನನುಸರಿಸುವುದು ಈ ಪ್ರಕರಣದಲ್ಲಿ ನೀತಿ ವಿರುದ್ಧವು. ಮೇಲೆ ಹೇಳಿದಂತೆ ವರ್ತಿಸಿದ್ದಲ್ಲಿ ನಿಮಗೆ ಕಾರ್ಯಲಾಭವಾಗುವುದೇನೋ ನಿಶ್ಚಯ. ಆದರೂ ಅದಕ್ಕೆ ಶತ್ರುಪೀಡೆಯು ಅನೇಕ ತೆರದಿಂದ ಸಂಭವಿಸುವದು. ಮಾನಸಿ ಸುಖಕ್ಕೆ ತುಂಬಾ ಹಾನಿಯಿದೆ. ನಿಮ್ಮ ಇಷ್ಟಸಿದ್ಧಿಯ ಸಲುವಾಗಿ ದೇಶಾಟನ ಮಾಡುವ ಪ್ರಸಂಗ ಬರುವುದು. ವಿವಾದದ ಸಂಬಂಧದಿಂದ ಧನವ್ಯಯವಾಗುವುದು. ರಾಜಕೀಯ ಭಾಗದಲ್ಲಿ ಅನಿಷ್ಟಸಂಭವಿಸುವದು. ತಾ. ೭ರಿಂದ ೧೧ರ ವರೆಗೆ ಹೆಚ್ಚಿನ ಅನಿಷ್ಟ, ಅನಾರೋಗ್ಯ, ಆಯಾಸಗಳು ಸಂಭವಿಸುವವು.

**ತುಲಾ:—**

ಹೆಚ್ಚಿನ ಭಾಗದಲ್ಲಿ ನಿಮಗೆ ಈ ವಾರವು ಬಹಳ ಅನುಕೂಲವಾಗಿರುವುದು. ಈ ವಾರದಲ್ಲಿ ನಿಮ್ಮ ಶರೀರ ಪ್ರಕೃತಿಯು ಬಹಳ ಉತ್ತಮ ಸ್ಥಿತಿಯಲ್ಲಿರುವುದು. ವ್ಯಾಪಾರ, ಉದ್ಯೋಗ ಇತ್ಯಾದಿಗಳ ಪರಿಸ್ಥಿತಿಯು ಮನಸ್ಸಿಗೆ ತೃಪ್ತಿಕರವಾಗಿರುವುದು. ಶತ್ರುಗಳ ಕಡೆಯಿಂದಲೂ ಹಣಕಾಸುಗಳ ಅಭಾವದಿಂದಲೂ ಪೂರ್ತಿಗೊಳ್ಳದ ನಿಮ್ಮ ಮನೋರಥವು ಈ ವಾರದಲ್ಲಿ ಕೊನೆಗಾಣುವುದು. ಧನಧಾನ್ಯಗಳಿಂದಲೂ, ಪುತ್ರ, ಪರಿಜನ, ಪಶ್ವಾದಿಗಳಿಂದಲೂ ನಿಮ್ಮ ಗೃಹ ಸಂಪತ್ತು ಪೂರ್ಣವಾಗಿರುವುದರಿಂದ ಭೂಪಾಲನಂತೆ ನೀವು ಕಾಲ ಕಳೆಯುವಿರಿ. ಆದರೂ ನಿಮ್ಮ ಮನಶ್ಶಾಂತಿಗೆ ಕೆಲವೊಮ್ಮೆ ಭಂಗವುಂಟಾಗುವುದು. ಇದಕ್ಕೆ ಮುಖ್ಯ ಕಾರಣರು ಸ್ತ್ರೀಯರೇ. ಈ ಸಲುವಾಗಿ ನಿಮಗೆ ಸ್ವಲ್ಪ ಧನವ್ಯಯವಾಗಬಹುದು. ವಾರದ ಅಂತ್ಯಭಾಗದಲ್ಲಿ ಕೆಲವು ಅನಿಷ್ಟಗ್ರಹರ ಬಲದಿಂದಾಗಿ ಪಿತ್ಥವಿಶೇಷದಿಂದ ನೇತ್ರೋದರ ರೋಗಗಳು ಮತ್ತು ವ್ಯರ್ಥ ಧನವ್ಯಯವೂ ಆಗಲಿದೆ.

**ವೃಶ್ಚಿಕ:—**

ಕೆಲವಂಶದಲ್ಲಿ ಇಷ್ಟವೂ ಕೆಲವಂಶದಲ್ಲಿ ಅನಿಷ್ಟವೂ ಕೂಡಿ ಮಿಶ್ರವಾಗಿ ಫಲಕೊಡುವುದು. ಈ ವಾರದಲ್ಲಿ ಹೆರವರ ಉತ್ಕರ್ಷತೆಯು ನಿಮಗೆ ಸಹನವಾಗಲೊಲ್ಲದು. ಇದೊಂದು ನಿಮ್ಮಲ್ಲಿರತಕ್ಕ ದೊಡ್ಡ ದೋಷವು. ಇದರಿಂದಾಗಿ ನಿಮಗೆ ಹಲವರೊಡನೆ ಮನಸ್ತಾಪವುಂಟಾಗುವುದು ಮಾತ್ರವಲ್ಲ, ಮಾನಹಾನಿಯೂ ಆಗುವುದು. ಕೆಲವು ಭಾಗಗಳಲ್ಲಿ ನಿಮ್ಮವರೇ ನಿಮಗೆ ಮೋಸಗೈಯ್ಯುವುದರಿಂದ ನಿಮ್ಮ ಮನಸ್ಸಿಗೆ ಅಸಹ್ಯವಾದ ವೇದನೆಯಾಗುವುದು. ನಿಮಗೆ ಅನೇಕ ಭಾಗಗಳಲ್ಲಿ ಧನಲಾಭವೂ ಕಾರ್ಯಗಳಲ್ಲಿ ಜಯವೂ ಕೂಡ ಸಿಗುವ ಯೋಗವಿದೆ. ಆದ್ದರಿಂದ 'ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಂಗೆ ಕೊಟ್ಟು ನಾ ಕೆಟ್ಟೆನೆನಬೇಡ,ಅದು ಮುಂದೆ ಕಟ್ಟಿಹಬುತ್ತಿ ಸರ್ವಜ್ಞ' ಎಂಬ ಸರ್ವಜ್ಞೋಕ್ತಿಯಂತೆ ನಿಮ್ಮಲ್ಲಿರತಕ್ಕ ಲುಬ್ಧತ್ವವನ್ನು ಬಿಟ್ಟು ಉದಾರಭಾವವನ್ನು ತಳೆಯಿರಿ. ಇದರಿಂದ ನಿಮಗೆ ಮುಂದೆ ಬಹಳ ಅನುಕೂಲವಾಗುವುದು. ರಾಜಸ್ಥಾನದಲ್ಲಿ ಸನ್ಮಾನವು ದೊರೆಯುವುದು. ತಾ ೭ರಿಂದ ೧೧ರ ವರೆಗಿನ ದಿನಗಳು ಅನುಕೂಲವಿರುವುದರಿಂದ ಶತ್ರುನಾಶ, ಆರೋಗ್ಯಲಾಭ, ಧನಲಾಭ, ಮಾನಸಿಕ ಸುಖಗಳು ದೊರೆಯುವವು.

**ಧನು:—**

ನಿಮ್ಮ ಶತ್ರುಗಳಿಗೆ ಇದು ವೃದ್ಧಿಯನ್ನೈದುವ ಕಾಲವು. ಆದ್ದರಿಂದ ಹಲವು ಪ್ರಕರಣಗಳಲ್ಲಿ ನಿಮಗೆ ಶತ್ರುಪೀಡೆಯು ಸಂಭವಿಸುವದು. ಆದರೂ ಅದರಿಂದಾಗಿ ನಿಮ್ಮ ಕಾರ್ಯವು ಕೆಟ್ಟುಹೋಗುವಂತಿಲ್ಲ. ಧನಜನಬಲಯುತರಾದ ನಿಮಗೆ ಯಾವ ಕಾರ್ಯವೂ ಕಷ್ಟಸಾಧ್ಯವಾಗಿ ತೋರದು. ದುಡಿದ ಹಣವು ಕೂಡ ಹಾಕಲು ಸಿಗಲೊಲ್ಲದು. ಆಗಾಗ ಖರ್ಚಾಗಿಯೇ ತೀರುವದು. ನಿವಲ್ಲಿ

ಹೃದಯವು ಶುದ್ಧವಿಲ್ಲದಿರುವುದರಿಂದ ನಿಮ್ಮ ಮಿತ್ರರಲ್ಲಿನ ಆಪ್ತತ್ವವು ಉಳಿಯಲಾರದು. ಆರೋಗ್ಯವು ಕೂಡ ಸಮಾಧಾನವಾಗಿಲ್ಲವು. ಮಾನಾದರಗಳು ಜನರಿಂದ ದೊರೆಯುವದು. ತಾ. ೯, ೧೦, ೧೧, ೧೨ರಲ್ಲಿ ಸ್ತ್ರೀಧನ ಲಾಭ, ವಾಹನಾದಿಗಳಲ್ಲಿಯೂ ಸವಿತ್ರ ಸಮಾಗಮ ಗಳು ಲಭಿಸುವವು.

**ಮಕರ:—**

ನಿಮ್ಮ ಭಾಗ್ಯಸ್ಥಾನವನ್ನು ಹೊಂದಿರತಕ್ಕ ಕುಜನನ್ನು ಹೊರತು ಇತರ ಸಮಸ್ತ ಗ್ರಹರೂ ನಿಮ್ಮ ಮೇಲೆ ಪ್ರಸನ್ನರಾಗಿರುವರು. ಆದ್ದರಿಂದಲೇ ನಿಮಗೆ ಸಾಂಪತ್ತಿಕ ಭಾಗದಲ್ಲಾಗಲೀ, ಶರೀರ ವಿಷಯದಲ್ಲಾಗಲೀ, ಇತರ ವ್ಯವಹಾರ ಸಂಬಂಧದಲ್ಲಾಗಲೀ, ಇನಿತೂ ಚಿಂತಿಸ ಬೇಕಾಗಿಲ್ಲವು. ಎಲ್ಲರೂ ನಿಮ್ಮ ಭಾಗಕ್ಕೆ ಮಿತ್ರರೇ ಆಗಿರುವರು. ಮನೋರಥಗಳು ಏನೊಂದೂ ತಡೆಯಿಲ್ಲದೆ ಜಯಶೀಲವಾಗಿ ಕೊನೆಗಾಣುವವು. ಮಾತ್ರವಲ್ಲ ಎಲ್ಲಾ ಭಾಗದಲ್ಲೂ ನಿಮ್ಮ ಅಭಿವೃದ್ಧಿಯ ಚಿಹ್ನೆಗಳೇ ಕಾಣ ಬರುತ್ತಿವೆ. ಸಾಂಸಾರಿಕ ಭಾಗಗಳು ಸರ್ವ ವಿಧದಿಂದಲೂ ಮನಸ್ಸಿಗೆ ತೃಪ್ತಿಕರವಾಗಿರುವವು. ಇಷ್ಟಿದ್ದರೂ ಅದೊಂದು ಅನಿರ್ವಾಚ್ಯವಾದ ಚಿಂತೆಯು ನಿಮ್ಮಲ್ಲಿದ್ದು ದೇಹದ ಕಾರ್ಶ್ಯಕ್ಕೆ ಕಾರಣವಾಗಿರುವುದು. ತಾ. ೭ರಿಂದ ೧೦ರ ತನಕದ ದಿನಗಳಲ್ಲಿ ವಿಶ್ವಾಸಘಾತಕದಿಂದಾಗಿ ವೈರವೂ, ಮನೋರೋಗವೂ ಅಧಿಕವಾಗುವದು

**ಕುಂಭ:—**

ಈ ವಾರದಲ್ಲಿ ನಿಮ್ಮ ಗ್ರಹಮಾನವು ತೀರಾ ಕೆಟ್ಟು ಹೋಗಿರುವುದರಿಂದ ಬಹಳ ತಾಪತ್ರಯಗಳಿಗೆ ಗುರಿಯಾಗುವಿರಿ. ಆಪತ್ತುಗಳು ಮೇಲಿಂದ ಮೇಲೆ ಬರುವವು. ಇದೇ ನಿಮ್ಮ ಆಪ್ತಮಿತ್ರರಾರೆಂದು ತಿಳಿಯಲು ಸುಸಮಯವಾಗಿರುವುದು. ಯಾಕಂದರೆ 'ಆಪದ್ಧಿ ನಿಕಷ ಗ್ರಾವಾ ಮಿತ್ರತತ್ವ ಪರೀಕ್ಷಣೇ' ಮಿತ್ರರೆಂಬ ಚಿನ್ನದ ಗುಣವನ್ನು ಪರೀಕ್ಷಿಸಿ ನೋಡಲು ಆಪತ್ತೆಂಬ ಒರೆಗಲ್ಲೇ ಸಹಾಯಕವಾಗುವುದು. ಈ ಆಪತ್ತಿನಲ್ಲಿ ನಿಮ್ಮ ಆನಾವ ಮಿತ್ರರು ಯಾವ್ಯಾವ ತರಗತಿಯವರು ಎಂಬುದನ್ನು ನೀವು ಸುಲಭವಾಗಿ ತಿಳಿದುಕೊಳ್ಳುವಿರಿ. ಹಣದ ಬಿಕ್ಕಟ್ಟಿನಿಂದಾಗಿ ಮಾನ ಕಾಯ್ದುಕೊಳ್ಳುವುದು ಬಹಳ ಕಷ್ಟಕ್ಕೆ ಬರುವುದು. ದೇಹಾಯಾಸದಿಂದಲೂ, ಜನರ ನಿಂದೆಯಿಂದಲೂ, ಮನಸ್ಸಿಗೆ ಸ್ವಲ್ಪವೂ ನೆಮ್ಮದಿಯಿಲ್ಲವು. ಎಲ್ಲಾ ಜನರಲ್ಲೂ ಕಲಹವಾಗುವುದರಿಂದ ಮಿತ್ರರೆಂಬವರು ಬೆರಳೆಣಿಕೆಗೂ ಸಿಗಲಾರರು. ತಾ. ೭-೮ ಬಿಟ್ಟು ಇತರ ದಿನಗಳು ಬಹಳ ಕಷ್ಟಾನಿಷ್ಟದಾಯಕಗಳಾಗಿವೆ.

**ಮೀನ:—**

'ಇತೋ ಭ್ರಷ್ಟಸ್ತತೋ ಭ್ರಷ್ಟಃ' ಎಂದಂತೆ ನಿಮಗೆ ಮನೆಯಲ್ಲಿಯೂ ಮನೆಯ ಹೊರಕ್ಕೂ ಎರಡೂ ಕಡೆಗಳಲ್ಲಿಯೂ ಸುಖವಿಲ್ಲವು. ಮನೆಯಲ್ಲಿ ಗೃಹಕಲಹವು ಹೆಚ್ಚಿ ಮನೆಯನ್ನು ಪ್ರವೇಶಿಸುವುದೇ ಬೇಡವೆಂದು ತೋರುವುದು. ಹೊರಕ್ಕೆ ಶತ್ರುಗಳ ಪೀಡೆ, ಖರ್ಚಿಗಾಗಿ ಹಣದ ಪೇಚಾಟ ಇವುಗಳಿಂದ ಬಹಳ ಶ್ರಮಪಡಬೇಕಾಗುವದು. ಸ್ವಯಂ ಶರೀರದಲ್ಲಿ ಆರೋಗ್ಯವಿಲ್ಲ. ಅಂತೂ ಇಂತೂ ಜೀವನವೇ ಬಹಳ ಕಷ್ಟವಾಗಿ ತೋರುವದು. ಈ ಎಲ್ಲಾ ಚಿಂತೆಗಳಿಂದಾಗಿ ಎಲ್ಲಿಯಾದರೂ ಹೋಗೋಣವೆಂದು ಹೊರಟು ಹೋದರೂ, 'ಊರು ಬಿಟ್ಟರೂ ಪ್ರಾರಬ್ಧ ಬಿಡ' ಎಂದಂತೆ ಅಲ್ಲೂ ನಾನಾ ತರದ ಕಷ್ಟಗಳಿಗೀಡಾಗುವಿರಿ. ಯಾವಾಗಲೂ ಮನೋರೋಗವು ಶರೀರವನ್ನು ದಹಿಸುತ್ತಲೇ ಇರುವುದು. ಅದರಲ್ಲೂ ತಾ. ೭, ೮, ೧೧, ೧೨ ಈ ದಿನಗಳು ಬಹಳ ಕಷ್ಟದಿಂದ ಕಳೆಯತಕ್ಕವುಗಳಾಗಿವೆ.

**—ಬಾಲಭಾಸ್ಕರ**

---

**ಗೆಳೆಯರ ತಂಡದ ಸದಸ್ಯರಾಗುವವರು ಅಂತರಂಗದ ಕೆಳಗಿನ ಕೂಪನಿನಲ್ಲಿ ಬರೆಯಬೇಕು.**

## ಗೆಳೆಯರ ತಂಡದ ಸದಸ್ಯತನದ ಪತ್ರ.

ನಾನು 'ಗೆಳೆಯರ ತಂಡ'ಕ್ಕೆ ಸೇರಲಿಚ್ಛಿಸುತ್ತೇನೆ. ಆ ಬಗ್ಗೆ ಸದಸ್ಯತನದ ಆರು ತಿಂಗಳ ವರ್ಗಣಿಯಾದ ನಾಲ್ಕಾಣೆಯನ್ನು ಕಳುಹಿಸಿರುತ್ತೇನೆ.

ಹೆಸರು. . . . . . . . . . . . . . . . . . . . . . . .

ವಿಳಾಸ. . . . . . . . . . . . . . . . . . . . . . . .

ಉದ್ಯೋಗ. . . . . . . . . . . . . . . . . . . . . . .

ಸಹಿ. . . . . . . . . . . . . . . . . . . . . . . . .

# ಅಂತರಂಗ ಸ್ಪರ್ಧೆ

ನಂ. ೧.

## ಪ್ರಥಮ ಬಹುಮಾನ:- ರೂಪಾಯಿ ೨೫

ದ್ವಿತೀಯ ಬಹುಮಾನ:- ಒಂದು ತಪ್ಪಿರುವ ಪ್ರತಿಯೊಂದು ಉತ್ತರಕ್ಕೆ "Paryayam Souvenir" ಎಂಬ ಸಚಿತ್ರ ಪುಸ್ತಕ.

ತೃತೀಯ ಬಹುಮಾನ:- "ಪುರಂದರದಾಸರ ಕೀರ್ತನೆ.

**ಸ್ಪರ್ಧೆಯಲ್ಲಿ ಭಾಗವಹಿಸುವವರಿಗೆ ಸೂಚನೆಗಳು:—**

ಈ ಸ್ಪರ್ಧೆಯ ಸರಿಯಾದ ಉತ್ತರವು 'ಅಂತರಂಗ'ದ ಸಂಪಾದಕರ ಬಳಿ ಮೊಹರು ಮಾಡಿ ಇಡಲಾಗಿದೆ. ಅದಕ್ಕೆ ಪ್ರತಿ ಅಕ್ಷರವೂ, ಸರಿಹೋಲತಕ್ಕ ಉತ್ತರಕ್ಕೆ ಮೊದಲನೆ ಬಹುಮಾನವೂ, ಒಂದು ಮತ್ತು ಎರಡು ತಪ್ಪಿರುವವುಗಳಿಗೆ ಎರಡು ಮತ್ತು ಮೂರನೆ ಬಹುಮಾನಗಳೂ ಕೊಡಲ್ಪಡುವುವು. ತಪ್ಪಾದ ಪ್ರತಿಯೊಂದು ಪದವೂ ಒಂದೊಂದು ತಪ್ಪಿನಂತೆ ಭಾವಿಸಲಾಗುತ್ತದೆ. ಬಹುಮಾನಕ್ಕೆ ಯೋಗ್ಯವಾದ ಉತ್ತರಗಳು ಒಂದಕ್ಕಿಂತ ಹೆಚ್ಚಾಗಿದ್ದಲ್ಲಿ ಮೇಲ್ಕಂಡ ಬಹುಮಾನಗಳು ಎಲ್ಲರಿಗೂ ಸರಿಸಮಾನವಾಗಿ ಹಂಚಲ್ಪಡುವುವು. ಬಹುಮಾನಗಳನ್ನು ಹಂಚುವ ವಿಚಾರ ಸ್ಪರ್ಧೆಯ ಮೆನೇಜರರಿಗೆ ಸೇರಿಮದು. ಈ ವಿಚಾರವಲ್ಲಿ ಯಾವ ಪತ್ರವ್ಯವಹಾರಗಳಿಗೂ ಅವಕಾಶವಿಲ್ಲ. ಪ್ರತಿ ಉತ್ತರಕ್ಕೂ ಪ್ರವೇಶ ಧನ ನಾಲ್ಕಾಣೆ. ಒಬ್ಬನು ಎಷ್ಟೂ ಉತ್ತರಗಳನ್ನು ಕಳುಹಿಸಬಹುದು. ಒಂದುರೂಪಾಯಿಗೆ ಐದು ಉತ್ತರಗಳನ್ನು ಕಳುಹಿಸಬಹುದು. ಪ್ರವೇಶ ಧನವನ್ನು ಪೋಸ್ಟಲ್ ಸ್ಟಾಂಪು, ಅಥವಾ ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಮನಿ ಆರ್ಡರ್ ಮೂಲಕ ರವಾನಿಸಬಹುದು. ಉತ್ತರವನ್ನು ಬರೆಯತಕ್ಕವರು ದಶಂಬರ ೧೦ರೊಳಗೆ ಬರೆದು ಕಳುಹಿಸಬೇಕು. ನಂತರ ಈ ಸ್ಪರ್ಧೆಗಾಗಿ ಕಳುಹಿಸುವ ಉತ್ತರಗಳನ್ನು ಸ್ವೀಕರಿಸುವುದಿಲ್ಲ. ಸರಿಯಾದ ಉತ್ತರವನ್ನು ದಶಂಬರ ೧೮ರ ಅಂತರಂಗದಲ್ಲಿ ಪ್ರಕಟಿಸಲಾಗುತ್ತದೆ. ಈ ಸ್ಪರ್ಧೆಯ ಉತ್ತರಗಳು ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು. ಈ ಕೂಪನುಗಳು ಈ ಸಂಚಿಕೆಯ ಮೊದಲ್ಗೊಂಡು ಅಂತರಂಗದ ನಾಲ್ಕು ಸಂಚಿಕೆಗಳಲ್ಲಿ ಪ್ರಕಟಿಸಲ್ಪಡುತ್ತವೆ. ಉತ್ತರ ಕೊಡುವವರು ತಮ್ಮ ಪೂರ್ಣ ವಿಳಾಸವನ್ನು ಬರೆಯತಕ್ಕದ್ದು.

ಉತ್ತರಗಳು ಕೆಳಗಿನ ವಿಳಾಸಕ್ಕೆ ಕಳುಹಿಸಲ್ಪಡಬೇಕು.

**ಮೆನೇಜರ್, 'ಅಂತರಂಗ ಸ್ಪರ್ಧೆ', ಅಂತರಂಗ, ಉಡುಪಿ.**

ವಿ. ಸೂ: ಈ ಸ್ಪರ್ಧೆಯಲ್ಲಿ ಸಪ್ಲೈ ಏಜನ್ಸಿ, ಲಿಮಿಟೆಡ್, ಉಡುಪಿ—ಇದರ ಯಾವ ನೌಕರರಿಗೂ ಭಾಗವಹಿಸಲೆಡೆಯಿಲ್ಲ.

**ಸ್ಪರ್ಧೆಯನ್ನು ಮುಂದಿನ ಪುಟದಲ್ಲಿ ನೋಡಿರಿ.**

Printed and published by P. Venkataramanacharya for and on behalf of SUPPLY AGENCY LTD., at Manipal Power Press, Udipi.

| | | | | | | | | |
|---|---|---|---|---|---|---|---|---|
| ೧ | ೨ | ದ ೩ | ೪ | ೫ | ■ | ೬ | ೭ | ನ ೮ |
| ೯ | ■ | ೧೦ | ■ | ೧೧ | ೧೨ | ೧೩ | ■ | ೧೪ |
| ೧೫ | ೧೬ | ೧೭ ಹ | ೧೮ | ■ | ೧೯ | ■ | ೨೦ | ೨೧ |
| ■ | ೨೨ | ೨೩ | ■ | ■ | ■ | ೨೪ | ೨೫ | ■ |
| ೨೬ | ■ | ೨೭ | ೨೮ | ■ | ೨೯ | ೩೦ | ಮ ೩೧ | ೩೨ |
| ೩೩ | ೩೪ | ■ | ೩೫ | ೩೬ | ಳೆ ೩೭ | ■ | ೩೮ | ■ |
| ೩೯ | ಡಾ ೪೦ | ೪೧ | ೪೨ | ■ | ೪೩ | ೪೪ | ದೆ ೪೫ | ■ |
| ೪೬ | ■ | ೪೭ | ■ | ತ ೪೮ | ೪೯ | ಣ ೫೦ | ■ | ಜ ೫೧ |
| ೫೨ | ೫೩ | ೫೪ | ■ | ೫೫ | ■ | ೫೬ | ೫೭ | ನ ೫೮ |

## ಎಡದಿಂದ ಬಲಕ್ಕೆ.

೧ರಿಂದ ೫ . . . . ವಾದ ಮಾತುಗಳಿಂದ ಇತರರಿಗೆ ಸಂತೋಷವಾಗುತ್ತದೆ.

೬ ,, ೮ . . . . ಗಳನ್ನು ಮಾಡುವವರಿಗೆ ತುಂಬಾ ವಿಚಾರ ಶಕ್ತಿಯಿರಬೇಕಾಗುತ್ತದೆ.

೧ ,, ೧೩ ಸವಿ.

೫ ,, ೧೮ . . . . ಉಡಿಗೆ ತೊಡಿಗೆಗಳಿಗಾಗಿ ಸ್ತ್ರೀಯರು ಹಂಬಲಿಸುತ್ತಾರೆ.

೦ ,, ೨೧ ಇದೊಂದನ್ನು ಬಿಟ್ಟರೆ ಹೊಟ್ಟೆತುಂಬಿಸಿಕೊಳ್ಳುವುದು ಕಷ್ಟವಲ್ಲ.

೨ ,, ೨೩ ಅತಿ . . . ಯಾಗಿರುವ ಪದಾರ್ಥಗಳನ್ನು ತಿಂದರೆ ಕೆಲವೊಮ್ಮೆ ಅನಾರೋಗ್ಯವುಂಟಾಗುತ್ತದೆ.

೪ ,, ೨೫ ದಟ್ಟ . . . ಗಳಲ್ಲಿ ಸಂಚರಿಸುವಾಗ ಜಾಗ್ರತೆಯಿಂದಿರಬೇಕಾಗುತ್ತದೆ.

೭ ,, ೨೮ ಋಷಿಗಳು ಇದರ ಬಲದಿಂದಲೇ ಜ್ಞಾನವನ್ನು ಸಂಪಾದಿಸುತ್ತಿದ್ದರು.

೯ ,, ೩೧ ನಲ್ಲೆಯರ . . . . ತುಟಿಗಳ ಕುರಿತು ಕವಿಗಳು ತುಂಬಾ ವರ್ಣಿಸಿದ್ದಾರೆ.

೩ ,, ೩೪ ಮ್ಯೂನಿಕ್ ಒಪ್ಪಂದದಲ್ಲಿ ರಷ್ಯವು . . . ವಹಿಸಲಿಲ್ಲ.

೩೫ ,, ೩೭ ಆಧುನಿಕ ಕನ್ನಡ ಕವಿತೆಯ ಛಂದಸ್ಸುಗಳೆಲ್ಲಾ ಇದರ ಪ್ರಭೇದಗಳು.

೩೯ ,, ೪೨ ಆರು ಆಗಮಗಳು.

೪೩ ,, ೪೫ ಡಿ. ವೆಂಕಟಾಚಾರ್ಯರ ಕಾದಂಬರಿಗಳಲ್ಲೊಂದರ ಹೆಸರು.

೪೮ ,, ೫೦ ಜವಾಹರಲಾಲ ನೆಹರುಗಳು ಹಿಂದುಸ್ಥಾನದ . . . ರ ಧುರೀಣರಾಗಿದ್ದಾರೆ.

೫೨ ,, ೫೪ ಇವರ ಸಂಸ್ಕೃತಿಯು ಆರ್ಯರ ಸಂಸ್ಕೃತಿಗಿಂತಲೂ ಪ್ರಾಚೀನವಾದುದೆಂದು ಹೇಳುತ್ತಾರೆ.

೫೬ ,, ೫೮ ದುಷ್ಟರ . . . ಕ್ಕಾಗಿ ಪರಮಾತ್ಮನು ಅವತರಿಸುತ್ತಾನಂತೆ.

## ಮೇಲಿಂದ ಕೆಳಗೆ

೧ ,, ೧೫ ವಿಶ್ರಾಂತಿ.

೨೬ ,, ೫೨ ಈಗಿನ ರಾಷ್ಟ್ರಪತಿ.

೩೪ ,, ೪೦ ಗತಕಾಲಂ ಲಯಕಾಲಮಾಯ್ತು ನಿನಗಿನ್ನಾಯ್ತುಂತ್ಯಕಾಲಂ . . . .

೩ ,, ೨೭ ಮುಗುಳು ನಗೆ.

೪೧ ,, ೫೪ ವಿಷ್ಣುವಿನ ವಾಹನ.

೨೮ ,, ೪೨ ಶ್ರೇಷ್ಠ.

೫ ,, ೧೧ ಇವನ ಲೋಕಕ್ಕೆ ಯಾರೂ ಹೋಗಲೊಪ್ಪುವುದಿಲ್ಲ.

೪೮ ,, ೫೫ ಕರೆ.

೧೨ ,, ೧೯ ಯುದ್ಧ.

೨೯ ,, ೪೯ ಇದು ಇಲ್ಲದಿದ್ದರೆ ಬೇಸಾಯ ಮಾಡುವುದು ಬಹಳ ಕಷ್ಟ.

೬ ,, ೧೩ ವಧುವಿನ . . . ಪಿಡಿವವನಿಗೆ ವರನೆನ್ನುತ್ತಾರೆ.

೨೪ ,, ೩೦ ವರನಿಗೆ ಕೈಕೊಡುವವಳಿಗೆ ಹೀಗೆನ್ನುತ್ತಾರೆ

೪೪ ,, ೫೬ . . . . ಹೆದರಿಕೆಯಿಂದ ಚೇಂಬರ್ಲೆನರು ಹಿಟ್ಲರನಿಗೆ ತಲೆಬಾಗಿದರು.

೨೦ ,, ೪೫ ದೇಹವನ್ನು ವಿಕ್ರಯಿಸಿಕೊಳ್ಳುವ ಸ್ತ್ರೀಯರಿಗೆ ಇದಿರುವುದಿಲ್ಲ.

೮ ,, ೨೧ ಹೊಸತು.

೫೧ ,, ೫೮ . . . ರಿಲ್ಲದ ಊರಿಗೆ ಹಾಳೂರೆನ್ನುತ್ತಾರೆ.

ಸ್ಪರ್ಧೆಯ (ಕೂಪನುಗಳಿಗೆ ೩೦ನೆ ಪುಟ ನೋಡಿರಿ)